॥ श्रीः ॥

# ಸಂಸ್ಕೃತ ವ್ಯಾಕರಣ ಸುರಭಿ

# SANSKRITA VYAAKARANA SURABHI





**DR. VENEESHASTRI B. JOSHI**
M.A.,Ph.D., Ph.D. (Poona)

**DR. KRISHNA V. JOSHI**
Vidwaan, M.A.,M.A. (Praakrit), Ph.D.



## Other Books By The Same Author

1. Vidyaaranya's Contribution to Advita
   Ph.D. Thesis, Parimal Publication, New Delhi
2. Drishti Srishtivaada - A study
   Second Ph.D. Thesis, Parimal Publication, New Delhi
3. Political elements in the Garuda Puraana
   P.G. Dept. of Sanskrit, Karnatak University, Dharwad
4. Political Ideals in the Shaanti Parva
   P.G. Dept. of Sanskrit, Karnatak University, Dharwad
5. Ancient Hindu Law and Administration in the Shatapatha Braahmana
   P.G. Dept. of Sanskrit, Karnatak University, Dharwad
6. Sanskrita Vyaakarana Surabhi
   Mahatee Publication, Dharwad
7. Sookti Sudhaanidhi
   Mahatee Publication, Dharwad
8. Shaareeraka Meemaamsaa (Chatussootri)
   Brahmavidyaa Prakaashana

vyam
n, Dharwad
a
n, Dharwad
ushamaa
nah
Sanskrit
itya Akademi, New Delhi

Kannada and English
njari
ndu Adhyayana

tra - Ondu Adhyayana
krita)

the author of more than 15 books &
krit, English & Kannada

॥ श्रीः ॥

# संस्कृत-व्याकरण-सुरभिः

# ಸಂಸ್ಕೃತ-ವ್ಯಾಕರಣ-ಸುರಭಿ

# SANSKRITA VYAAKARANA SURABHI

DR. VENEEMADHAVASHASTRI B. JOSHI
M.A., Ph.D., Ph.D. (Poona)
Professor of Sanskrit & Prakrit
Karnatak College, Dharwad

DR. KRISHNA V. JOSHI
Vidwaan, M.A., M.A. (Prakrit), Ph.D.
Asst. Prof. Karnatak Sanskrit University, Bangaluru

MAHATI PRAKAASHANA
DHARWAD - 580 008
KARNATAKA

2016

**SANSKRITA VYAAKARANA SURABHI**
(A Handbook of Sanskrit Grammar in kannada)
Dr. VENEEMADHAVASHASTRI B. JOSHI M.A., Ph.D., Ph.D. (Poona)
Professor of Sanskrit and Prakrit (RTD), Karnatak Arts College, Dharwad - 580001
Dr.KRISHNA V. JOSHI, Vidwaan, M.A., M.A. (Prakrit), Ph.D. ASST. Prof. Karnataka Sanskrit University, Bangaluru



**Smt. SUMATI K. JOSHI**
**MAHATI PUBLICATIONS, DHARWAD**
"BHAAMATEE", BENDRE MAARGA,
SAADHANAKERI, DHARWAD - 580008
Ph : 0836 - 2446788, Mobile : 9449357212
email - mahatipublications@yahoo.in

| | |
|---|---|
| Pages | : viii + 217 |
| ISBN | : 978 - 81 - 8465 - 560 - 5 |
| Copies | : 1000 |
| **First Edition** | : **2011** |
| **Second Edition** | : **2011** |
| **Third Edition** | : **2015** |
| **Fourth Edition** | : **2016** |
| Price | : 120/- |
| © | : AUTHORS |
| Type setting | : Smt. PRATIBHA PATWARDHAN DHARWAD - 4<br>UNITED COMPUTERS, DHARWAD-8 |
| Printer | : SARASWATI OFFSET PRINTERS,<br>DHARWAD - 580001 |



*-Books Available at-*

| | |
|---|---|
| Bharat Book Depot<br>Dharwad<br>Mobile : 0836-2447349 | Pracheta Book House<br>Bangalore<br>Mobile : 9448505732 |



ಯೋಗತಪಃಸಿದ್ಧರು ಶ್ರೀ ಶ್ರೀ ಜಗದ್ಗುರುಗಳು ಶ್ರೀ ಅವಿಚ್ಛಿನ್ನ ಪರಂಪರಾ ಕೂಡ್ಲೀಶೃಂಗೇರಿ ಪೀಠಾಧೀಶ್ವರರು ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯವರ್ಯರು ಬ್ರಹ್ಮೀಭೂತ (ಇಸ್ವಿ 2002)

**ಶ್ರೀ ಶ್ರೀ ಯೋಗಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರ**

ದಿವ್ಯಚರಣಾರವಿಂದಗಳ ಸನ್ನಿಧಾನದಲ್ಲಿ

**'ಸಂಸ್ಕೃತ ವ್ಯಾಕರಣ ಸುರಭಿ'**

ಈ ಕೃತಿಯನ್ನು ಭಕ್ತಿಯಿಂದ ಶಿರಸಾಷ್ಟಾಂಗನಮನಪೂರ್ವಕವಾಗಿ ಸಮರ್ಪಿಸಲಾಗಿದೆ.

ಮಕರ ಸಂಕ್ರಾಂತಿ 15–1–2011



ಶ್ರೀ ಶ್ರೀ ಜಗದ್ಗುರುಗಳು ಶ್ರೀ ಅವಿಚ್ಛಿನ್ನ ಪರಂಪರಾ
ಕೂಡ್ಲೀಶೃಂಗೇರಿ ಪೀಠಾಧೀಶ್ವರರು

**ಶ್ರೀ ಶ್ರೀ ವಿದ್ಯಾಭಿನವ ಶಂಕರಭಾರತೀ**
**ಮಹಾಸ್ವಾಮಿಗಳವರು**

## ಆಶೀರ್ವಚನ

ನಿಧಯೇ ಸರ್ವ ವಿದ್ಯಾನಾಂ ಭಿಷಜೇ ಭವರೋಗಿಣಾಂ ।
ಗುರವೇ ಸರ್ವಲೋಕಾನಾಂ ದಕ್ಷಿಣಾಮೂರ್ತಯೇ ನಮಃ ॥

ಸಂಸ್ಕೃತವು ಭಾರತೀಯ ಸಂಸ್ಕೃತಿಯ ಕೇಂದ್ರಬಿಂದು. ಧರ್ಮ, ಅಧ್ಯಾತ್ಮ, ಸಾಹಿತ್ಯ, ಇತಿಹಾಸ, ವಿವಿಧ ಶಾಸ್ತ್ರಗಳು, ಪುರಾಣಗಳು, ವಿಜ್ಞಾನ, ದರ್ಶನ ಇವೆಲ್ಲವುಗಳು ಸಂಸ್ಕೃತದಲ್ಲಿ ಸಮೃದ್ಧವಾಗಿವೆ. ಅನಂತವಾದ ಈ ಸಾಹಿತ್ಯ ಅಜರಾಮರ. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್।" ಎಂಬುದು ಮಹಾಭಾರತಕ್ಕಿಂತ ಹೆಚ್ಚು ಸಂಸ್ಕೃತ ಸಾಹಿತ್ಯಕ್ಕೆ ಸಾರ್ಥಕವಾಗಿ ಅನ್ವಯಿಸುವುದು. ಅಂತಹ ಸಂಸ್ಕೃತದ ಕಲಿವಿಗೆ ದೈವದತ್ತವಾದ ಪಾಣಿನಿಯ ವ್ಯಾಕರಣ ಸೂತ್ರಗಳು ಗಟ್ಟಿಯಾದ ತಳಹದಿ. ವ್ಯಾಕರಣವು ಮುಗಿಲಿನಂತೆ ಬಹಳ ವಿಸ್ತೃತ ಮತ್ತು ಕಡಲದಂತೆ ಅಗಾಧ. ಅಮೂಲಾಗ್ರವಾಗಿ ಅದನ್ನು ಕಲಿಯುವುದು ಹೆಚ್ಚು ಕಠಿಣ. ಅದನ್ನು ತಿಳಿಯಾಗಿ ಮಾಡಿ ಅತ್ಯಾವಶ್ಯಕವಾದ ಅಂಶಗಳನ್ನು ಸಂಗ್ರಹಿಸಿ ಈ 'ಸಂಸ್ಕೃತ ವ್ಯಾಕರಣ ಸುರಭಿ'ಯಲ್ಲಿ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಅನುಕೂಲವಾಗುವುದಕ್ಕೆ ಕೊಟ್ಟದ್ದು ಮಹೋಪಕಾರವಾಗಿದೆ.

ನಮ್ಮ ಪೂರ್ವಾಶ್ರಮದಲ್ಲಿ ನಾವೇ ಡಾ. ವೇಣೀಮಾಧವಶಾಸ್ತ್ರಿಗಳ ಸಹಯೋಗದಿಂದ ಇಂತಹ ಪುಸ್ತಕ ರಚಿಸಲು ಸಂಕಲ್ಪಿಸಿದ್ದೆವು. ಅದು ಈಗ ಒದಗಿ ಬಂದಿದೆ. ಅವರ ಜೊತೆಗೆ ಅವರ ಪುತ್ರ ಡಾ. ಕೃಷ್ಣಜೋಶಿ ಇವನೂ ಕೂಡ ಹೆಗಲುಕೊಟ್ಟಿದ್ದು ಅಭಿನಂದನೀಯವಾಗಿದೆ. ಎಲ್ಲ ವಿದ್ಯಾರ್ಥಿಗಳು, ಶಿಕ್ಷಕರು ಹಾಗೂ ಜಿಜ್ಞಾಸುಗಳು ಸಂಸ್ಕೃತವನ್ನು ಸರಿಯಾದ ದಾರಿಯಲ್ಲಿ ಕಲಿತು, ಅದರ ದಿವ್ಯತೆಯನ್ನು ಸಾಕ್ಷಾತ್ಕರಿಸಿಕೊಂಡಲ್ಲಿ ನಮ್ಮ ಸಂಕಲ್ಪ ಮತ್ತು ಅವರ ಪರಿಶ್ರಮ ಎರಡೂ ಸಾರ್ಥಕವಾಗುವಲ್ಲಿ ಸಂದೇಹವಿಲ್ಲ. ನಮ್ಮ ಶ್ರೀ ಅವಿಚ್ಛಿನ್ನ ಪರಂಪರಾ ಕೂಡ್ಲೀಶೃಂಗೇರಿ ಮಠದ ಹಿಂದಿನ ಪೀಠಾಧೀಶ್ವರರಾದ ಯೋಗಸಿದ್ಧಿ ಸಂಪನ್ನರಾದ ಶ್ರೀ ಶ್ರೀ ಜಗದ್ಗುರುಗಳು ಬ್ರಹ್ಮೀಭೂತ ಶ್ರೀ ಶ್ರೀ ಯೋಗಾಭಿನವನೃಸಿಂಹ ಭಾರತೀ ಮಹಾಸ್ವಾಮಿಗಳವರ ದಿವ್ಯ ಚರಣಕಮಲಗಳಲ್ಲಿ ಈ ಕೃತಿಯನ್ನು ಸಮರ್ಪಿಸಿ ಅವರ ಸಮನುಗ್ರಹಕ್ಕೆ ಪಾತ್ರರಾಗಿದ್ದಾರೆ. ಎಲ್ಲರಿಗೂ ಶ್ರೀ ಶ್ರೀ ವಿದ್ಯಾಶಂಕರಮಹಾಸ್ವಾಮಿಯು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಮತ್ತು ಸಂಸ್ಕೃತ ಕಲಿಯುವ ಸನ್ಮತಿಯನ್ನು ದಯಪಾಲಿಸಲಿ ಎಂದು ಆಶಿಸುತ್ತೇವೆ.

# ಪ್ರಾ ಸ್ತಾ ವಿ ಕ

ಯಾವ ಜನ್ಮದ ಪುಣ್ಯವೋ ಇಂತಹ ಅಮೋಘ ಕೃತಿಗೆ ಮುನ್ನುಡಿ ಬರೆಯುವ ಭಾಗ್ಯವು ನನಗೆ ಲಭಿಸಿದೆ. ಸಂಸ್ಕೃತದಲ್ಲಿ ವ್ಯಾಕರಣಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು ಹೊರಬಂದಿದ್ದರೂ "ಸಂಸ್ಕೃತ ವ್ಯಾಕರಣ ಸುರಭಿ" ಇಂತಹ ಕೃತಿ ಬಂದಿರಲಿಲ್ಲ. ಗ್ರಂಥದ ಹೆಸರೇ ಸೂಚಿಸುವಂತೆ 'ಸುರಭಿ' ಎಂದರೆ ಕಾಮಧೇನು. ಸಂಸ್ಕೃತದ ಅನೇಕ ವಿಷಯವನ್ನು ತಿಳಿಸಿಕೊಡುವ ಗ್ರಂಥ ಇದಾಗಿದ್ದು ಹೆಸರು ಅನ್ವರ್ಥಕವಾಗಿದೆ. ಪ್ರಸಿದ್ಧ ಅಮರಕೋಶದ ಶ್ಲೋಕಗಳ ಸಂಗ್ರಹ, ಧಾತು ರೂಪಗಳ ಪಟ್ಟಿ, ನ್ಯಾಯಗಳು, ನಾಣ್ಣುಡಿಗಳು, ಅಲಂಕಾರ, ಶಬ್ದರೂಪಾವಲಿ, ವೃತ್ತ, ಅನುವಾದ ಪರಿಚ್ಛೇದಗಳು, 'ಗಮನಿಸಿ' ಎಂಬ ಶ್ಲೋಕಗಳು ಹೀಗೆ ವಿವಿಧ ವಿಷಯಗಳ ಸಂಗ್ರಹ ಈ ಕೃತಿ. ಸರ್ವಶಾಸ್ತ್ರೋಪಕಾರಕವಾದ ವ್ಯಾಕರಣಶಾಸ್ತ್ರದ ಮೂಲ ಸ್ರೋತಕ್ಕೆ ಕಾರಣೀಭೂತರಾದ ಪಾಣಿನಿ ಮಹರ್ಷಿಗಳ ಸೂತ್ರಗಳ ಅರ್ಥವನ್ನು ಅತ್ಯಂತ ಸರಳ ಭಾಷೆಯಲ್ಲಿ ಅವಗತವಾಗುವಂತೆ ಮಾಡುವ ಇಂತಹ ಕೃತಿಯು ಬಂದಿರಲಿಲ್ಲ. ಸಂಸ್ಕೃತವು ಪಂಡಿತರ ಭಾಷೆ, ಸಾಮಾನ್ಯ ಜನರಿಗೆ ಅನುಪಯೋಗಿ ಎನ್ನುವ ಈಗಿನ ದಿನಗಳಲ್ಲಿ ಸರಳ ಸಂಸ್ಕೃತವನ್ನು ಪರಿಚಯಿಸುತ್ತಿರುವ ಈ ಕೃತಿ ಹೊರಬರುತ್ತಿರುವುದು ಮನಸ್ಸಿಗೆ ಬಹಳ ಆಹ್ಲಾದವನ್ನುಂಟುಮಾಡಿದೆ. ಪ್ರೌಢ ಹಾಗೂ ಸರಳ ಭಾಷೆಯ ಕಲಿಕೆಗೆ ಬಹೂಪಯೋಗಿಯಾಗಿ ಸಕಲ ಜನಮನದಲ್ಲಿ ಉಳಿಯುವ ಹಾಗೆ ಈ ಗ್ರಂಥ ಅನೇಕ ವಿಷಯಗಳನ್ನು ಪರಿಚಯಿಸುತ್ತಿದೆ.

ಪರಮಪೂಜ್ಯರೂ, ಸದಾಚಾರಸಂಪನ್ನರೂ ಆದ ಡಾ.ವಿದ್ವಾನ್ ಬ್ರಹ್ಮಶ್ರೀ ಗುರುಮೂರ್ತಿ ಶಾಸ್ತ್ರಿಗಳವರು ನನ್ನ ವಿದ್ಯಾ ಗುರುಗಳು. ಇವರು ಸರ್ವತಂತ್ರ ಸ್ವತಂತ್ರರೂ, ವಿದ್ಯಾವಾಚಸ್ಪತಿಗಳೂ, ರಾಷ್ಟ್ರಪ್ರಶಸ್ತಿ ಪುರಸ್ಕೃತರೂ ಆದ ಬ್ರಹ್ಮಶ್ರೀ ಭಾಲಚಂದ್ರ ಶಾಸ್ತ್ರಿಗಳವರ ಸನ್ನಿಧಾನದಲ್ಲಿಯೇ ತಮ್ಮ ಪ್ರೌಢಾಧ್ಯಯನವನ್ನು ಪೂರೈಸಿದವರು. ಅದೇ ಪರಂಪರೆಯಲ್ಲಿ ಅಧ್ಯಯನ ಮಾಡುವ ಅವಕಾಶ ನನ್ನದೂ ಆಗಿದೆ. ವಿದ್ವತ್ತು, ಸದಾಚಾರ, ಅನುಷ್ಠಾನ ಇವುಗಳ ಸಂಗಮವೇ ಆದ, ತಪಸ್ವೀಜೀ ಮಹಾರಾಜರೆಂದೇ ಪ್ರಸಿದ್ಧರಾದ ಪೂಜ್ಯ ಭಾಲಚಂದ್ರಶಾಸ್ತ್ರಿಗಳವರ ಸತ್ಪುತ್ರರಾದ, ಎರಡು ಡಾಕ್ಟರೇಟ್ ಪದವಿಯನ್ನು ಪಡೆದ ಡಾ.ವೇಣೀಮಾಧವಶಾಸ್ತ್ರಿಗಳ ಓದು ಬರಹ ಅಗಾಧವಾಗಿದೆ. "ವಿಲಕ್ಷಣ ಜ್ಞಾನಾಶ್ರಯಃ ಪಂಡಿತಃ" ಎಂಬ ಮಾತಿಗೆ ಉತ್ತಮ ಉದಾಹರಣೆಯಾಗಿರುವ ಇವರು ಶಾಸ್ತ್ರವಿಷಯಗಳಲ್ಲಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಾ ಸಂಸ್ಕೃತ ಭಾಷೆಯ ಬಗೆಗೆ ಅಭಿಮಾನ ಹುಟ್ಟಿಸಿ ಭಾಷಾಧ್ಯಯನಕ್ಕೆ ಅನುಕೂಲ ಮಾಡಿಕೊಡುತ್ತಿದ್ದಾರೆ. ಪ್ರಾಚೀನ ಪರಂಪರೆಯ ಸಂಸ್ಕೃತಾಧ್ಯಯನವನ್ನು ತೋರಿಸುವ ಇವರ ಈ ಕೃತಿಯನ್ನು ಅಧ್ಯಯನಶೀಲರು, ವಿದ್ಯಾರ್ಥಿಗಳು, ಸಂಸ್ಕೃತಾಭಿಮಾನಿಗಳು ಓದಿ ಸದುಪಯೋಗ ಪಡಿಸಿಕೊಂಡರೆ ಇವರ ಪರಿಶ್ರಮ ಸಫಲವಾಗುತ್ತದೆ. ಸತತೋದ್ಯೋಗಿಗಳೂ ವಿದ್ವತ್ ತಲ್ಲಜರು ಆದ ಇವರು ಈ ಕೃತಿಯನ್ನು ರಚಿಸಿದ್ದಾರೆಂದರೆ ಅದನ್ನು ವಿಮರ್ಶಿಸುವದು ಸಾಹಸಮಾತ್ರ. ಕೇವಲ ನನ್ನ ಅನಿಸಿಕೆಗಳನ್ನು ಮಾತ್ರ ಇಲ್ಲಿ ಹಂಚಿಕೊಂಡಿದ್ದೇನೆ. ಯೋಗತಪಃಸಿದ್ಧರಾದ, ಜಗದ್ಗುರುಗಳಾದ ಶ್ರೀ ಶ್ರೀ ಯೋಗಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರ ದಿವ್ಯ ಅನುಗ್ರಹವೂ ಇವರಿಗೆ ಇದ್ದುದು ಇನ್ನೂ ಒಂದು ವಿಶೇಷ.

ಪ್ರಸಿದ್ಧವಾದ ಕರ್ನಾಟಕ ಕಾಲೇಜಿನಲ್ಲಿ ಸಹಾಯಕ ಉಪನ್ಯಾಸಕರು, ಡಾ.ವೇಣೀಮಾಧವಶಾಸ್ತ್ರಿಗಳವರ ಪುತ್ರರೂ ಆಗಿರುವ ವಿನಯಶೀಲರಾದ ಶ್ರೀ ಡಾ.ಕೃಷ್ಣಶಾಸ್ತ್ರೀ ಜೋಶಿಯವರೂ ಕೂಡ ಈ ಕೃತಿಯ ರಚನೆಯಲ್ಲಿ ಸಹಭಾಗಿಗಳಾಗಿರುವದು ಇನ್ನೊಂದು ವಿಶೇಷ. ಒಟ್ಟಾರೆ ಜಿಜ್ಞಾಸುಗಳ ಜ್ಞಾನಪಿಪಾಸೆಯನ್ನು ತೀರಿಸುವಲ್ಲಿ ಈ ಕೃತಿಯು ಕಾಮಧೇನೂ ಹೌದೂ (ಸುರಭಿ) ವಸಂತಮಾಸವೂ ಹೌದು.

ಭಾರತ ಹುಣ್ಣಿಮಾ
18-2-2011

ನ್ಯಾಯವಿದ್ವಾನ್ ಚಂದ್ರಮೌಳಿ ಜಿ. ಸಿಂದಗಿ
(ಅಧ್ಯಕ್ಷ ಅಖಿಲಕರ್ನಾಟಕ ಪ.ಪೂ.ಉಪನ್ಯಾಸಕರ ಸಂಘ)
ಚಾಮರಾಜ ಪೇಟ, ಬೆಂಗಳೂರ



# ಮುನ್ನುಡಿ

**ज्ञानप्रकाशदातारं स्नेहतैलसुपूरितम्।**
**मोहतामसहन्तारं गुरुदीपं नमाम्यहम्॥**

ಅಮರಸಿಂಹನ ಅಮರಕೋಶವು ಸಂಸ್ಕೃತ ವ್ಯಾಕರಣ ಗ್ರಂಥಗಳ ಅಗ್ರಪಂಕ್ತಿಗೆ ಸೇರಿದ ಸುವರ್ಣಕೃತಿ. ಇಲ್ಲಿ ಕೇವಲ ಪರ್ಯಾಯ ಪದಗಳನ್ನು ಸಂಗ್ರಹಿಸಿಲ್ಲ, ವ್ಯಾಕರಣದ ಸರ್ವಸ್ವವನ್ನೇ ಸಾರರೂಪದಲ್ಲಿ ಸಂಗ್ರಹಿಸಿದ್ದಾನೆ. ಅಂತೆಯೇ अमरसिंहस्तु पापीयान् सर्वं भाष्यमचूचुरत् ಎಂದು ವಿದ್ವಾಂಸರು ಹೊಟ್ಟೆಕಿಚ್ಚಿನಿಂದ ಅವನನ್ನು ಬೈದಂತೆ ಮಾಡಿದರೂ ಪರ್ಯಾಯವಾಗಿ ಅವನನ್ನು ಬಾಯಿತುಂಬ ಹೊಗಳಿದ್ದಾರೆ. ಪಾತಂಜಲ ವ್ಯಾಕರಣ ಮಹಾಭಾಷ್ಯದ ಎಲ್ಲ ಸೂಕ್ಷ್ಮಾಂಶಗಳನ್ನು ಕೂಡ ಇಲ್ಲಿ ಇಳಿಸಿ ಬಿಟ್ಟಿದ್ದಾನೆ. ಅಂತೆಯೇ ಸಾಂಪ್ರದಾಯಿಕ ಅಧ್ಯಯನದಲ್ಲಿ ಕಂಠಪಾಠ ಮಾಡುವ ಪಟ್ಟಿಯಲ್ಲಿ ಇದಕ್ಕೆ ಅಗ್ರ ತಾಂಬೂಲ.

ನನಗೆ ನಮ್ಮ ಮನೆಯೇ ಮೊದಲ ಪಾಠಶಾಲೆ. ಶ್ಲೋಕಗಳನ್ನು ಕಂಠಪಾಠ ಮಾಡುವದರಿಂದಲೇ ಓದು ಪ್ರಾರಂಭ. ಬಾಲ್ಯದಲ್ಲಿಯೇ ನನಗೆ ಅಮರಕೋಶದ ಮೂರೂ ಕಾಂಡಗಳನ್ನು ಕಂಠಪಾಠ ಮಾಡಿಸಿದ ನನ್ನ ಪರಮಪೂಜ್ಯ ತಂದೆಯವರಾದ ರಾಷ್ಟ್ರಪ್ರಶಸ್ತಿ ಪುರಸ್ಕೃತರಾದ ಬ್ರಹ್ಮಶ್ರೀ ಭಾಲಚಂದ್ರಶಾಸ್ತ್ರಿಗಳವರು ಮತ್ತು ನನ್ನ ಚಿಕ್ಕಪ್ಪ ಪ್ರೊ.ಮಹೇಶ್ವರಶಾಸ್ತ್ರೀ ಜೋಶಿ ಇವರಿಗೆ ಎಷ್ಟು ಕೃತಜ್ಞತೆ ನಮನಗಳನ್ನು ಸಲ್ಲಿಸಿದರೂ ಕಡಿಮೆಯೇ. ಅಮರಕೋಶ, ಸಮಾಸಚಕ್ರ, ಶಬ್ದರೂಪಾವಲೀ, ಧಾತುರೂಪಾವಲೀ ಮತ್ತು ವೃತ್ತಮಾಲಾ ಇವುಗಳನ್ನು ಕಂಠಪಾಠ ಮಾಡುವ ಸಂಪ್ರದಾಯ ಇಂದಿಗೂ ಇದೆ. ಇವೆಲ್ಲವುಗಳನ್ನು ಕಂಠಪಾಠ ಮಾಡಿಸಿದಾಗ ಅವುಗಳ ಅರ್ಥಜ್ಞಾನ ನನಗಿರಲಿಲ್ಲ. ತಿಳಿದುಕೊಳ್ಳಬೇಕೆಂಬ ಅರಿವೂ ಇರಲಿಲ್ಲ. ಸುಮ್ಮನೇ ಕಂಠಪಾಠ ಮಾಡಿದ್ದು ನಂತರ ಕಾವ್ಯಾದಿಗಳನ್ನು ಅಧ್ಯಯನ ಮಾಡುತ್ತಾ ಹೊರಟಾಗ ಅವುಗಳ ಅಪಾರ ಮಹಿಮೆಯ ಬಗ್ಗೆ ಜ್ಞಾನೋದಯವಾದಾಗ ನನ್ನ ಕೃತಾರ್ಥತೆಗೆ ಮೇರೆಯೇ ಇಲ್ಲದ ಅನುಭವವಾಯಿತು. ಅದು ಕಾಲೇಜಿನಲ್ಲಿ ನನ್ನ 38 ವರುಷದ ಅಧ್ಯಾಪನದಲ್ಲಿ ಬಹಳ ಪ್ರಭಾವ ಬೀರಿತ್ತು. 5ನೇ ವರ್ಗದಿಂದ MA., Ph.D. ವರೆಗೆ ಅಧ್ಯಾಪನ ಮಾಡಿದ್ದು ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಕುಂದುಕೊರತೆಗಳನ್ನು ಅರಿತು ಪರಿಹಾರದ ದೆಸೆಯಲ್ಲಿ ಧೈರ್ಯದಿಂದ ಈ ಗ್ರಂಥ ರಚಿಸಲು ಪ್ರೇರಣೆಯೂ ಆಗಿದೆ.

ಹತ್ತು ವರುಷಗಳ ಹಿಂದೆಯೇ ಅರ್ಧ ಬರೆದು ಕಾರಣಾಂತರದಿಂದ ಮುಂದುವರೆಸಿರಲಿಲ್ಲ. ಸಂಸ್ಕೃತ ಮತ್ತು ಸಂಸ್ಕೃತಿಯ ಸಂರಕ್ಷಣೆಯಲ್ಲಿ ಬದ್ಧಸ್ಪೃಹರಾದ ಶ್ರೀಅವಿಚ್ಛಿನ್ನ ಪರಂಪರಾ ಕೂಡಲಿ ಶೃಂಗೇರಿ ಪೀಠಾಧೀಶ್ವರರಾದ ಶ್ರೀಶ್ರೀ ಜಗದ್ಗುರು ವಿದ್ಯಾಭಿನವ ಶಂಕರಭಾರತೀ ಶ್ರೀಶ್ರೀಗಳವರು ಸಂಸ್ಕೃತ ಅಧ್ಯಯನದ ಬಗ್ಗೆ ಅಮೇಯ ಆಸಕ್ತಿ ಹೊಂದಿ ಪೂರ್ವಾಶ್ರಮದಲ್ಲಿ ಹೀಗೊಂದು ವ್ಯಾಕರಣ ಗ್ರಂಥ ರಚಿಸುವಲ್ಲಿ ಸಂಕಲ್ಪ ಮಾಡಿ ನನಗೆ ವಹಿಸಿಕೊಟ್ಟಿದ್ದರು. ಕಾರಣಾಂತರದಿಂದ ಮುಗಿಯಲಿಲ್ಲ. ಸಂಸ್ಕೃತದ ಪ್ರಚಾರದಲ್ಲಿ ಅತ್ಯಂತ

ಕಳಕಳಿಯ ಹೃದಯವಂತಿಕೆ ಹೊಂದಿದ ಅವರ ನಿರಂತರ ಪ್ರೋತ್ಸಾಹನದಿಂದ ಈಗ ಮತ್ತೆ ರಚಿಸಿ ಪೂರ್ತಿಗೊಳಿಸಲು ಅಕ್ಷಯ ಪ್ರೇರಣೆ ದೊರಕಿತು. ಅವರಿಗೆ ನನ್ನ ಅನಂತಾನಂತ ಶಿರಸಾಷ್ಟಾಂಗ ನಮನಗಳು. ಇವರ ಹಿಂದಿನ ಪೀಠಾಧೀಶ್ವರರಾದ ಯೋಗತಪಸ್ಸಿದ್ಧರಾಗಿದ್ದ ಬ್ರಹ್ಮೀಭೂತ ಶ್ರೀಶ್ರೀ ಯೋಗಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರ ದಿವ್ಯ ಅನುಗ್ರಹದಿಂದಲೇ ಈ ಕೃತಿಯನ್ನು ಪೂರೈಸಲಾಯಿತು ಎಂಬಲ್ಲಿ ಎರಡು ಮಾತಿಲ್ಲ. ಯೋಗಿವರ್ಯಗುರುವರೇಣ್ಯರಾದ ಅವರ ಚರಣಕಮಲದ ಸನ್ನಿಧಾನದಲ್ಲಿ ಅನಂತ ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸಿ ಈ ಕೃತಿಯನ್ನು ಅವರ ದಿವ್ಯಚರಣ ಸನ್ನಿಧಾನದಲ್ಲಿ ಸಮರ್ಪಿಸಿದ್ದೇನೆ.

ಈಗಿನ ಕಾಲದಲ್ಲಿ ಪುಸ್ತಕ ರಚಿಸುವದು ಬಹಳ ಸುಲಭ. ಆಯಾ ವಿಷಯದ ಮೇಲೆ ಅನೇಕ ಪುಸ್ತಕಗಳು ಪ್ರಕಾಶಗೊಂಡಿರುತ್ತವೆ. ಬೇರೆ ಬೇರೆ ಲೇಖಕರ ಕೆಲಕೆಲವು ಅಂಶಗಳನ್ನು ಸಂಗ್ರಹಿಸಿ ಬಿಟ್ಟರೆ ಪುಸ್ತಕ ತಯಾರಾಗಿಬಿಡುತ್ತದೆ. ಬಾಣಕವಿಯು ಇದನ್ನೇ ಉಲ್ಲೇಖಿಸಿ ಕವಿಯು ಕಳ್ಳನಂತಿರುತ್ತಾನೆ ಎನ್ನುತ್ತಾನೆ. ಬೇರೆ ಬೇರೆ ಶಬ್ದಗಳನ್ನು ಬದಲಾಯಿಸಿ, ಹಲವು ರಚನೆಗಳನ್ನು ಅಡಗಿಸಿ ಕವಿಗಳ ಮಧ್ಯದಲ್ಲಿ ಸದ್ದಿಲ್ಲದೆ ಬಂದು ಕುಳಿತುಕೊಳ್ಳುವನು. ಬಣ್ಣಬದಲಾಯಿಸಿ ಗುರುತುಗಳನ್ನು ಪರಿವರ್ತಿಸಿ ಯಾರಿಗೂ ಗೊತ್ತಾಗದಂತೆ ವರ್ತಿಸುವ ಕಳ್ಳನಂತೆ ಇರುತ್ತಾನೆ

अन्यवर्ण-परावर्त्य बन्धचिह्ननिगूहनैः ।
अनाख्यातः सतां मध्ये कविश्चोरो विभाव्यते ।।

ಎಂದು ಕೃತಿಚೌರ್ಯದ ಸಂಪ್ರದಾಯವನ್ನು ಕಟುವಾಗಿ ಟೀಕಿಸಿದ್ದಾನೆ. ಏನೇ ಆದರೂ ಸಿದ್ಧವಿರುವ ಕೆಲವು ಅಂಶಗಳನ್ನು ಬೇರೆ ಗ್ರಂಥಗಳಿಂದ ಅನಿವಾರ್ಯವಾಗಿ ತೆಗೆದುಕೊಳ್ಳಲೇ ಬೇಕಾಗುತ್ತದೆ.

ಈಗಾಗಲೆ ಕಾಲೇಜಿನಲ್ಲಿ ನನ್ನ ಗುರುಗಳಾಗಿದ್ದ ದಿ.ಡಾ.ಬಿ.ಆರ್.ಮೋಡಕ ಹಾಗು ದಿ.ಡಾ.ಡಿ.ಎನ್.ಶಾನಭಾಗ ಅವರ ವ್ಯಾಕರಣ ಗ್ರಂಥಗಳು ವಿಷಯಗಳನ್ನು ಜೋಡಿಸಿ ಇಟ್ಟಂತೆ ಜಿಜ್ಞಾಸುಗಳಿಗೆ ಸಿಕ್ಕಿವೆ. ಅದರಲ್ಲಿಯೂ ಪೂಜ್ಯ ಡಾ.ಶಾನಭಾಗ ಗುರುಗಳ ಪುಸ್ತಕವಂತೂ ಸಿದ್ಧಪಡಿಸಿದ ಅಡಿಗೆ ಇದ್ದಂತೆ ವ್ಯವಸ್ಥಿತವಾಗಿದೆ. ಆದರೂ ಅನೇಕ ಅಂಶಗಳನ್ನು ಸೇರಿಸಿ ಕೆಲವು ಹೆಚ್ಚಿನ ಅಂಶಗಳನ್ನು ಕಡಿಮೆ ಮಾಡಿ ಸಾಂಪ್ರದಾಯಿಕ ಅಂಶಗಳನ್ನು ಯೋಜಿಸಿ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಅನುಕೂಲವಾಗುವಂತೆ ಮಾಡಲು ಪರಿಶ್ರಮಿಸಲಾಗಿದೆ. ಆ ನನ್ನ ಪರಮಪೂಜ್ಯ ಗುರುಗಳಿಗೆ ಅನಂತ ಕೃತಜ್ಞತೆಗಳು ಮತ್ತು ಭಕ್ತಿಪೂರ್ವಕ ನಮನಗಳು.

ವ್ಯಾಕರಣ ವಿದ್ವಾನ್ ದಿ.ಕೃಷ್ಣಶಾಸ್ತ್ರೀ ಸಂಗಮ, ನರೇಗಲ್ ಇವರು ಧಾರವಾಡದ ಶ್ರೀಶಂಕರಾಚಾರ್ಯ ಪಾಠಶಾಲೆಯಲ್ಲಿ ಸಾಂಪ್ರದಾಯಿಕವಾಗಿ ವ್ಯಾಕರಣವನ್ನು ಓದಿದ್ದರು. ನರೇಗಲ್ಲಿನಲ್ಲಿ ಬಹಳ ಕಷ್ಟಜೀವನದಲ್ಲಿಯೂ ವ್ಯಾಕರಣಶಾಸ್ತ್ರದ ಕಲಿವನ್ನು ರಕ್ಷಿಸಿಕೊಂಡು ಬಂದಿದ್ದರು. ಧಾರವಾಡಕ್ಕೆ ಮರಳಿ ಬಂದಾಗ ಅವರ ಹತ್ತಿರ ಸಿದ್ಧಾಂತ ಕೌಮುದಿ ಹೇಳಿಸಿಕೊಳ್ಳುವ ಭಾಗ್ಯ ನನ್ನದಾಯಿತು. ಆಂಗ್ಲಭಾಷಾ, ನ್ಯಾಯ ವೇದಾಂತಗಳ ಅಧ್ಯಯನ ಪ್ರವಾಹದಲ್ಲಿ ಇದಕ್ಕೆ

ಹೆಚ್ಚು ಗಮನ ಕೊಡಲಿಕ್ಕೆ ಆಗದಿದ್ದರು, काणादं पाणिनीयं च सर्वशास्त्रोपकारकम् ಎಂಬಂತೆ ಅನಿವಾರ್ಯವಾಗಿಯಾದರೂ ಕಲಿತದ್ದು ನನಗೆ ಚ್ಯವನಪ್ರಾಶ ತೆಗೆದುಕೊಂಡಂತಾಯಿತು. ಬಹಳ ಶಾಂತ ಮತ್ತು ಸಮಾಧಾನದಿಂದ ವಿವರವಾಗಿ ಕಲಿಸಿದ ಅವರಿಗೆ ನಾನು ನನ್ನ ಅನಂತ ಧನ್ಯವಾದಗಳನ್ನು ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಇದಕ್ಕೆ ಸಹಾಯದ ಸೆಲೆಯನ್ನೇ ನೀಡಿದ ನನ್ನ ಧರ್ಮಪತ್ನಿ ಶ್ರೀಮತಿ ರಮಾದೇವಿಗೂ, ಇತರರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸಲೇ ಬೇಕು.

ಅಖಿಲ ಕರ್ನಾಟಕ ಪ.ಪೂ. ಉಪನ್ಯಾಸಕ ಸಂಘದ ಅಧ್ಯಕ್ಷರಾದ, ಸತತ ಪರಿಶ್ರಮಿಗಳೂ, ನಿರಂತರ ಅಧ್ಯಯನಶೀಲರೂ ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಿದ ನ್ಯಾಯವಿದ್ವಾನ್ ಪ್ರೊ.ಚಂದ್ರಮೌಳಿ ಸಿಂದಗಿ ಅವರು ಬಹಳ ಆತ್ಮೀಯತೆಯಿಂದ ಮುನ್ನುಡಿ ಬರೆದು ಕೊಟ್ಟಿದ್ದಾರೆ. ಸಂಸ್ಕೃತದ ಅಧೀತಿ-ಬೋಧಾಚರಣದಲ್ಲಿ ಅವರು ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಧೀರ ಉಪನ್ಯಾಸಕರು. ಅವರಿಗೂ ನನ್ನ ಕೃತಜ್ಞತೆಗಳು.

ಸುಮಾರು ಒಂದು ವರುಷದಿಂದಲೂ ಬಹಳ ಪರಿಶ್ರಮದಿಂದ ಸಮಾಧಾನದಿಂದ ನಾನು ಎಷ್ಟೇ ಬದಲಾವಣೆಗಳನ್ನು ಮಾಡಿದರೂ ಸಹಕರಿಸಿ ಮೇಧಾಯಂತ್ರದಲ್ಲಿ ಈ ಗ್ರಂಥವನ್ನು ಅಳವಡಿಸಿಕೊಟ್ಟ ಶ್ರೀಮತಿ ಪ್ರತಿಭಾ ಪಟವರ್ಧನ ಅವರಿಗೆ ಎಷ್ಟು ಧನ್ಯವಾದಗಳನ್ನು ಹೇಳಿದರೂ ಕಡಿಮೆ.

ಅಂದವಾದ ಮುಖಪುಟದ ವಿನ್ಯಾಸ ಮಾಡಿದ, ಸಮಾಧಾನದ ಸೆಲೆಯಂತಿರುವ ಶ್ರೀ ವಿಶ್ವಜ್ಞ ಅವರಿಗೂ ಸುಂದರವಾಗಿ ಮುದ್ರಿಸಿ ಕೊಟ್ಟ, ಶ್ರೀ ಸಂಜೀವ ಕ. ಜಕರೆಡ್ಡಿ, ಸಂಗಮ ಪ್ರಿಂಟರ್ಸ್, ಬೇಂದ್ರೇ ಮಾರ್ಗ, ಧಾರವಾಡ ಅವರಿಗೂ ನನ್ನ ಧನ್ಯವಾದಗಳು.

ಎಲ್ಲ ಹಂತದಲ್ಲಿ ಸಂಸ್ಕೃತ ಅಧ್ಯಯನ ಅಧ್ಯಾಪನ ಮಾಡುತ್ತಿರುವ ವಿದ್ಯಾರ್ಥಿಗಳು ಹಾಗು ಶಿಕ್ಷಕರು ಇದರ ಸರಿಯಾದ ವಿನಿಯೋಗ ಮಾಡಿಕೊಂಡು ಸಂಸ್ಕೃತವನ್ನು ಕಲಿತಲ್ಲಿ ನಮ್ಮ ಪರಿಶ್ರಮ ಸಾರ್ಥಕವೆಂದು ಭಾವಿಸಿದ್ದೇನೆ.

ಧಾರವಾಡ
ಮಕರ ಸಂಕ್ರಾಂತಿ
15-1-2011

ಡಾ.ವೇಣೀಮಾಧವ ಶಾಸ್ತ್ರೀ ಜೋಶಿ
Professor of Sanskrit & Prakrit (RTD)
Karnatak College, Dharwad

जिह्वा तिष्ठेद् वशे यस्य वेगः कामस्य संहृतः।
सौजन्यं हृदये यस्य स्वर्गस्तेन जितो ध्रुवम्॥



# ಸಂಸ್ಕೃತ-ವ್ಯಾಕರಣ-ಸುರಭಿ

## ಅಧ್ಯಾಯಗಳ ಮುನ್ನೋಟ







# ಸಂಸ್ಕೃತ ವ್ಯಾಕರಣ ಸುರಭಿ

## ಅಧ್ಯಾಯ ೧

## ವರ್ಣಮಾಲೆ

श्रुतिमानसहंसी मे मतितामससूदिनी।
करोतु मानसे वासं शारदा वरदा सदा।।

येन प्रसन्न-प्रतिभाजलेन सुसंस्कृता भारतभारतीयं
हंसीव कीर्तिः प्रसृता वरं यं नमामि तं पाणिनिराजहंसम्।।

अज्ञानातप तप्तोऽहं ज्ञान सौदामनीयुतं।
वात्सल्य-सलिलाधारं गुरुमेघं समाश्रये।।

ಸಂಸ್ಕೃತವ್ಯಾಕರಣವು ದಿಗಂತ ವಿಶ್ರುತವಾಗಿ ಮೆರೆಯುವದಕ್ಕೆ ವೈಜ್ಞಾನಿಕವಾದ ಅದರ ವ್ಯಾಕರಣವೇ ಚೈತನ್ಯದ ಸೆಲೆಯಾಗಿದೆ. ವ್ಯಾಕರಣದ ಪಿತಾಮಹನಾದ ಪಾಣಿನಿಯ ಸೂತ್ರಗಳು (ಕಿ. ಪೂ. ೩೦೦) ವ್ಯಾಕರಣದ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿ ಜಗತ್ಪ್ರಸಿದ್ಧವಾಗಿವೆ. ಈಗಿನ ಗಣಕಯಂತ್ರದ ನವಯುಗದಲ್ಲಿ ಸಂಸ್ಕೃತಭಾಷೆ, ಮತ್ತು ಲಿಪಿ ಹೊಸಹಾದಿಯನ್ನೆ ತುಳಿಯುತ್ತಲಿದೆ. ಸಮೃದ್ಧವಾದ ಸಾಹಿತ್ಯ, ಅಕ್ಷಯವಾದ ಶಬ್ದ ಭಾಂಡಾರ ವೈಜ್ಞಾನಿಕ ಯುಗದ ಹೊಸ ಹೊಸ ಶಬ್ದಗಳನ್ನು ಸರಳವಾಗಿ ಸೃಷ್ಟಿ ಮಾಡುವ ಸೌಲಭ್ಯ ವ್ಯವಸ್ಥಿತವಾದ ವ್ಯಾಕರಣ ಸುದೀರ್ಘವಾದ ಭವ್ಯ ಪರಂಪರೆ ಇವು ಸಂಸ್ಕೃತಕ್ಕೆ ಮಾತ್ರ ಸಿಗುವ ಸೌಭಾಗ್ಯವಾಗಿದೆ. ಇಂತಹ ಭಾಷೆಯ ವ್ಯವಸ್ಥಿತವಾದ ಅಧ್ಯಯನವು ಜ್ಞಾನ ಸಾಮ್ರಾಜ್ಯದ ಮಹಾದ್ವಾರವೇ ಆಗಿದೆ.

ಸಂಸ್ಕೃತಭಾಷೆಯಲ್ಲಿ ೪೬ ವರ್ಣಗಳಿವೆ. ಪಾಣಿನಿಯು ಈ ವರ್ಣಗಳನ್ನು ತನ್ನ ಶಾಸ್ತ್ರಕ್ಕೆ ಭದ್ರ ಬುನಾದಿಯಾದ ೧೪ ಸೂತ್ರಗಳಲ್ಲಿ ವೈಜ್ಞಾನಿಕವಾಗಿ ಅಳವಡಿಸಿದ್ದಾನೆ. ಇವುಗಳಿಗೆ ಮಾಹೇಶ್ವರ-ಸೂತ್ರಗಳೆಂದೇ ಹೆಸರು. ಪರಮೇಶ್ವರನು ತನ್ನ ಡಮರುವನ್ನು ೧೪ ಸಲ ವಿಭಿನ್ನರೀತಿಯಲ್ಲಿ ಬಾರಿಸಿದಾಗ ಈ ಸೂತ್ರಗಳಿಗೆ ಪ್ರೇರಣೆಯು ದೊರೆಯಿತು. ಹೀಗೆ ಮಹೇಶ್ವರನ ಅನುಗ್ರಹದಿಂದ ರಚಿಸಿರುವದಕ್ಕೆ ಇವುಗಳಿಗೆ माहेश्वर सूत्राणि ಎಂದೇ ಕರೆಯಲಾಗಿದೆ. ಈ ಸೂತ್ರಗಳಲ್ಲಿ ಸ್ವರ, ಅರ್ಧಸ್ವರ, ಅನುನಾಸಿಕ ಕಠೋರವ್ಯಂಜನ ಇತ್ಯಾದಿಯಾಗಿ ವ್ಯವಸ್ಥಿತವಾಗಿ ಹೇಳಲಾಗಿದೆ. (ಇವು ಕಂಠಪಾಠ ಮಾಡಬೇಕು.) ಸೂತ್ರಗಳು ಹೀಗಿವೆ -

अ इ उ ण् । ऋ लृ क्। ए ओ ङ् । ऐ औ च्। ह य व र ट्। लण्। ञ म ङ ण न म्। झ भ ञ् । घ ढ ध ष्। ज ब ग ड द श्। ख फ छ ठ थ च ट त व्। क प य्। श ष स र्। हल्। इति माहेश्वरप्रत्याहारसूत्राणि अणादि संज्ञार्थानि।

ಈ ಸೂತ್ರಗಳ ಕೊನೆಗೆ ಇರುವ ಅರ್ಧಾಕ್ಷರಗಳನ್ನು, इत् ಎಂದು ಕರೆಯಲಾಗಿದೆ. ವರ್ಣಗಳ ಎಣಿಕೆಯಲ್ಲಿ ಇವುಗಳನ್ನು ಗಣನೆಮಾಡಬಾರದು. 5ನೇ ಸೂತ್ರದಿಂದ ಮುಂಬರುವ ವರ್ಣಗಳಲ್ಲಿರುವ अ ಕಾರವು (ಉದಾ ह्+अ = ह, य्+अ = य) ಕೇವಲ ಉಚ್ಛಾರಣೆಯ ಸೌಕರ್ಯಕ್ಕೆ ಇರುತ್ತದೆ. ಈ इत् ಗಳ ಸಹಾಯದಿಂದ ಅನೇಕ ವರ್ಣಗಳನ್ನು ಸಂಕ್ಷಿಪ್ತ ರೂಪದಲ್ಲಿ ಹೇಳುವದೇ ಪ್ರತ್ಯಾಹಾರ. ಈ ಪ್ರತ್ಯಾಹಾರಗಳನ್ನು ಸಿದ್ಧಮಾಡುವದೇ ಈ ಸೂತ್ರಗಳ ಅಗ್ರಿಮೋದ್ದೇಶ. ಆದ್ದರಿಂದಲೇ ಇವುಗಳಿಗೆ प्रत्याहार सूत्राणि अणादि संज्ञार्थानि ಎಂದು ಹೇಳಲಾಗಿದೆ.

इत् ಸಂಜ್ಞೆಯ ಜೊತೆಗೆ ಹೇಳಿದ ಮೊದಲನೆಯ ಅಕ್ಷರವು ತನ್ನನ್ನು ಮತ್ತು ತನ್ನಿಂದ ಹಿಡಿದು ಈ ಸೂತ್ರಗಳಲ್ಲಿ ಆ इत् ಸಂಜ್ಞೆಯಿರುವ ಅಕ್ಷರದವರೆಗೆ ಬರುವ ಅಕ್ಷರಗಳನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಸೂಚಿಸುತ್ತದೆ.(आदिरन्तेन सहेता) ಹೀಗೆ ಸಂಕ್ಷಿಪ್ತವಾಗಿ ಹೇಳುವ ಪ್ರಕ್ರಿಯೆಗೆ ಪ್ರತ್ಯಾಹಾರವೆಂದು ಹೆಸರು.

ಉದಾ अच् ಎಂದರೆ ಮೊದಲನೆಯ ಸೂತ್ರದ अ ಅಕ್ಷರದಿಂದ ಹಿಡಿದು च् ಎಂಬ इत् ವರೆಗೆ ಬರುವ ಅಕ್ಷರಗಳನ್ನು ಗಣನೆಗೆ ತೆಗೆದುಕೊಂಡಾಗ ಮಧ್ಯದಲ್ಲಿ ಬರುವ अ इ उ ऋ लृ ए ओ ऐ औ (च्) ಈ ಎಲ್ಲ ಅಕ್ಷರಗಳಿಗೂ ಸ್ವರ (अच्) ಎಂದು ಕರೆಯಬಹುದು. ಮಧ್ಯದಲ್ಲಿ ಅಂದರೆ ೧,೨,೩, ಸೂತ್ರಗಳಲ್ಲಿ ಬರುವ ण् क् ङ् ಈ इत्‌ಗಳನ್ನು ಹಿಡಿಯಬಾರದು. ಇದೇ ರೀತಿಯಾಗಿ हल् ಎಂದರೆ ह य व र ट् ಸೂತ್ರದಲ್ಲಿ ಬರುವ ह ಮತ್ತು ಕೊನೆಯ ಸೂತ್ರದ ल् ಇವುಗಳ ಮಧ್ಯದಲ್ಲಿ ಬರುವ ಎಲ್ಲ ಅಕ್ಷರಗಳಿಗೂ ಸಂಜ್ಞೆಯಾಗುತ್ತದೆ. ಹೀಗೆ ಎಲ್ಲ ವ್ಯಂಜನಗಳಿಗೂ हल् ಎಂಬ ಸಂಜ್ಞೆಯಾಗುವದು.

ಇದೇ ರೀತಿಯಾಗಿ इक्,यण्,एच्,झल्, ಮುಂತಾದ ಸಂಜ್ಞೆಗಳ ಬಳಕೆಯು ಸಂಧಿಪ್ರಕರಣದಲ್ಲಿ ಹೆಚ್ಚು ಸ್ಪಷ್ಟವಾಗಿ ತೋರುತ್ತದೆ. ಎಲ್ಲ ಸ್ವರಗಳನ್ನೂ ಅಥವಾ ವ್ಯಂಜನಗಳನ್ನು ಬರೆದು ಸೂಚಿಸುವದಕ್ಕಿಂತ अच् ಅಥವಾ हल् ಎಂದು ಸಂಜ್ಞೆಯ ಮೂಲಕ ಅವುಗಳನ್ನು ತಿಳಿಸುವದೇ ಈಸೂತ್ರಗಳ ವೈಜ್ಞಾನಿಕತೆ.

ಸಂಸ್ಕೃತ ಭಾಷೆಯ ೪೭ ವರ್ಣಗಳಲ್ಲಿ ೧೩ ಸ್ವರಗಳು ಮತ್ತು ೩೩ ವ್ಯಂಜನಗಳು.

## ಸ್ವರಗಳು (अच्)

अ इ उ ऋ लृ ಇವು ಹ್ರಸ್ವಸ್ವರಗಳು. आ ई ऊ ॠ ए ऐ ओ औ ಇವು ಧೀರ್ಘಸ್ವರಗಳು [ಬೇರೆ ಬೇರೆ ಸ್ವರಗಳನ್ನು ಉಚ್ಛಾರಮಾಡಲು ಬೇರೆ ಬೇರೆ ಕಾಲಾವಕಾಶವು ಬೇಕಾಗುತ್ತದೆ. ಇದಕ್ಕನುಸರಿಸಿ ಸ್ವರಗಳನ್ನು, ಹ್ರಸ್ವ, ಧೀರ್ಘ ಮತ್ತು ಪ್ಲುತ ಎಂದು (ऊकालोऽज् ह्रस्वदीर्घ प्लुतः) ವಿಂಗಡಿಸಲಾಗಿದೆ. ಒಂದು ಮಾತ್ರಾ ಕಾಲಾವಕಾಶವಿರುವ ಸ್ವರಕ್ಕೆ ಹ್ರಸ್ವವೆಂದು,

ಎರಡು ಮಾತ್ರಾ ಕಾಲಾವಕಾಶವಿರುವ ಸ್ವರಕ್ಕೆ ಧೀರ್ಘವೆಂದು, ಮೂರು ಅಥವಾ ಅದಕ್ಕೆ ಹೆಚ್ಚು ಮಾತ್ರೆಯ ಕಾಲಾವಕಾಶವಿದ್ದರೆ ಪ್ಲುತವೆಂದು (ಏಽಽ ಹೀಗೆ ಸಂಬೋಧನೆಯಲ್ಲಿದೆ.) ವಿಭಾಗಿಸಲಾಗಿದೆ. क्‌ ख्‌ य्‌ र्‌ ಮುಂತಾದ ವ್ಯಂಜನಗಳನ್ನು ಉಚ್ಚಾರ ಮಾಡಲು ಅರ್ಧಮಾತ್ರೆಯ ಕಾಲಮಿತಿ ಬೇಕಾಗುತ್ತದೆ. ಇದೇ ಅರ್ಥವನ್ನು ಸಂಗ್ರಹಿಸಿದ ಈ ಕೆಳಗಿನ ಶ್ಲೋಕವನ್ನು ತಪ್ಪದೇ ಕಂಠಪಾಠ ಮಾಡಬೇಕು.

एकमात्रो भवेद् ह्रस्वो द्विमात्रो दीर्घ उच्यते ।
त्रिमात्रस्तु प्लुतो ज्ञेयो व्यञ्जनं त्वर्धमात्रकम् ॥

ಛಂದಸ್ಸಿನಲ್ಲಿ ಲಘು ಮತ್ತು ಗುರು ಗಳನ್ನು ಬಳಸುವಾಗ ಇದೇ ನಿಯಮ ಅನುಸರಿಸಲಾಗಿದೆ.] (ಸಂಸ್ಕೃತದಲ್ಲಿ ಧೀರ್ಘ ऌ ಇರುವದಿಲ್ಲ). ए ऐ ओ औ ಇವು ಸಂಯುಕ್ತ ಧೀರ್ಘಸ್ವರಗಳು. ಅಂದರೆ ಎರಡು ಸ್ವರಗಳಿಂದ ಕೂಡಿದ ಸ್ವರಗಳು. ಉದಾ-ए = अ + इ (ई) ಅಥವಾ आ + इ (ई); ऐ = अ + ए (ऐ) ; ओ = अ + उ (ऊ) ಅಥವಾ आ + उ (ऊ) ; औ = अ + ओ (औ) ।

## ವ್ಯಂಜನಗಳು (हल्)

ಸಂಸ್ಕೃತದಲ್ಲಿ ೩೩ ವ್ಯಂಜನಗಳನ್ನು ಅವುಗಳ ಉತ್ಪತ್ತಿಸ್ಥಾನಕ್ಕೆ ಅನುಸರಿಸಿ ಹೀಗೆ ವಿಂಗಡಿಸಲಾಗಿದೆ

क्‌ ख्‌ ग्‌ घ्‌ ङ्‌ (क वर्गः) ಕಂಠದಿಂದ ಉತ್ಪನ್ನವಾಗುವದರಿಂದ ಇವು - कण्ठ्य .
च्‌ छ्‌ ज्‌ झ्‌ ञ्‌ (च वर्गः)ಗಳ ಉತ್ಪತ್ತಿ ಬಾಯಿಯ ಅಂಗಳದ ಮುಂಭಾಗದಲ್ಲಿ - तालव्य.
ट्‌ ठ्‌ ड्‌ ढ्‌ ण्‌ (ट वर्गः)ಗಳ ಉತ್ಪತ್ತಿ ಬಾಯಿಯ ಅಂಗಳದಿಂದ - मूर्धन्य.
त्‌ थ्‌ द्‌ ध्‌ न्‌ (त वर्गः) ಹಲ್ಲಿನ ಸಹಾಯದಿಂದ ಉಚ್ಚರಿಸಲ್ಪಡುವ ಇವು - दन्त्य
प्‌ फ्‌ ब्‌ भ्‌ म्‌ (प वर्गः) ತುಟಿಯ ಸಹಾಯದಿಂದ ಉಚ್ಚರಿಸಲ್ಪಡುವ ಇವು - ओष्ठ्य
य्‌ र्‌ ल्‌ व्‌ ಅಂತಸ್ಥವರ್ಣಗಳು (य र ल व अन्तस्थाः)
श्‌ ष्‌ स्‌ ह्‌ ಊಷ್ಮವರ್ಣಗಳು (श ष स ह ऊष्माणः)

ವ್ಯಂಜನಗಳ ಮತ್ತು ಸ್ವರಗಳ ಉತ್ಪತ್ತಿ ಸ್ಥಾನವು ಮೇಲಿನ ಸ್ಥಾನಗಳಲ್ಲಿ ಒಂದೊಂದಾಗಿದೆ. ಕೆಲವು ಅಕ್ಷರಗಳಿಗೆ ಎರಡೆರಡು ಸ್ಥಾನಗಳು ಉಂಟು. ವ್ಯಂಜನಗಳ ವರ್ಗಗಳನ್ನು ಕ್ರಮವಾಗಿ ಹೀಗೆ ಸೂಚಿಸಲಾಗಿದೆ. क च ट त प

ಸಂಸ್ಕೃತದಲ್ಲಿ ಳ ವ್ಯಂಜನವಿರುವದಿಲ್ಲ (ಅದು ವೇದದಲ್ಲಿ ಮಾತ್ರ ಬರುತ್ತದೆ). क्ष ಮತ್ತು ज्ञ ಇವು ಸಂಯುಕ್ತ ವ್ಯಂಜನಗಳು ಅಂದರೆ, ಮಧ್ಯದಲ್ಲಿ ಸ್ವರ ಬರದೇ ಕೇವಲ ಎರಡು ಅಥವಾ ಮೂರು ವ್ಯಂಜನಗಳು ಕೂಡಿದವುಗಳು. ಹೀಗೆ क्‌ + ष्‌ = क्ष्‌, ज + ञ = ज्ञ,

ಅನುಸ್ವಾರ (ಂ) ಮತ್ತು ವಿಸರ್ಗ(ಃ)ಗಳಿಗೆ ಸ್ವತಂತ್ರವಾದ ಅಸ್ತಿತ್ವವಿರುವದಿಲ್ಲ. ಇನ್ನೊಂದು ಅಕ್ಷರದ ಜೊತೆಗೆ ಇವುಗಳ ಬಳಕೆ ಇರುತ್ತದೆ.

क् ಮತ್ತು ख् ಗಳ ಮೊದಲು ಬರುವ ವಿಸರ್ಗಕ್ಕೆ जिह्वामूलीय (:क :ख) ಎಂದು, प ಮತ್ತು फ ಗಳ ಮೊದಲು ಬರುವ ವಿಸರ್ಗಕ್ಕೆ उपध्मानीय (:प :फ) ಎಂದು ಕರೆಯಲಾಗಿದೆ.

ವ್ಯಂಜನಗಳನ್ನು कर्कश (ಕಠೋರ) ಮತ್ತು मृदु ಎಂದು ವಿಂಗಡಿಸಲಾಗಿದೆ.

### ಕರ್ಕಶ ವ್ಯಂಜನಗಳು (खर् वर्णाः = अघोष प्रयत्नः)

ಪ್ರತಿಯೊಂದು ವರ್ಗದ ಮೊದಲಿನ ಎರಡು ಮತ್ತು ಊಷ್ಮ ವರ್ಣಗಳು क् ख्, च् छ्, ट् ठ्, त् थ्, प् फ्, ಮತ್ತು श् ष् स् ह्

### ಮೃದು ವ್ಯಂಜನಗಳು (हश् वर्णाः = घोष प्रयत्नः)

ಪ್ರತಿಯೊಂದು ವರ್ಗದ ಕೊನೆಯ ಮೂರು ವರ್ಣಗಳು (हश्) ಮತ್ತು ಅಂತಸ್ಥವರ್ಣಗಳು ಮತ್ತು ಮಹಾ ಪ್ರಾಣಗಳು : ग् घ् ङ्, ज् झ् ञ्, ड् ढ् ण्, द् ध् न्, ब् भ् म्, य् र् ल् व्. (ह् ಇದನ್ನು ಕೆಲವರು ಮೃದು ವ್ಯಂಜನವೆಂದು ಪರಿಗಣಿಸುತ್ತಾರೆ.)

ವರ್ಗದ ಕೊನೆಗೆ ಬರುವ ञ् म् ङ् ण् न् ವರ್ಣಗಳಿಗೆ ಅನುನಾಸಿಕ ಎನ್ನುವರು. ಪ್ರತಿಯೊಂದು ವರ್ಗದ ೧, ೩, ಮತ್ತು ೫ ನೇ ವರ್ಣಗಳು ಹಾಗು ಅಂತಸ್ಥಗಳು (य् र् ल् व्) ಅಲ್ಪಪ್ರಾಣಗಳಾಗಿವೆ. ವರ್ಗದ ೨ ಮತ್ತು ೪ನೇ ವರ್ಣ ಹಾಗು ಊಷ್ಮ ವರ್ಣಗಳು (श ष स ह) ಮಹಾಪ್ರಾಣಗಳಾಗಿವೆ.

ವರ್ಣಗಳ ಉತ್ಪತ್ತಿ ಸ್ಥಾನಗಳನ್ನು ಸೂಚಿಸುವ ಈ ಕೆಳಗಿನ ಸೂತ್ರಗಳನ್ನು ಕಂಠಪಾಠ ಮಾಡಬೇಕು.

अ कु ह विसर्जनीयानां कण्ठः । इ चु य शानां तालु। ऋ टु र षाणां मूर्धा । लृ तु ल सानां दन्ताः। उ पूपध्मानीयानां ओष्ठौ । ञ म ङ ण नानां नासिका च । ए दै तोः कण्ठोष्ठौ। ओ दौ तोः कण्ठतालू । व कारस्य दन्तोष्ठम्। जिह्वामूलीयस्य जिह्वामूलम्। नासिका अनुस्वारस्य।

ಸವರ್ಣ ಸಂಜ್ಞೆಯನ್ನು ಹೇಳುವಾಗ (ಸಂಧಿ ಮುಂತಾದವುಗಳಲ್ಲಿ) ವರ್ಣಗಳ ಸ್ಥಾನ ಮತ್ತು ಪ್ರಯತ್ನಗಳು ಒಂದೇ ಇರಬೇಕು. (तुल्यास्य प्रयत्नं सवर्णं) ಪ್ರಯತ್ನಗಳು ಅಭ್ಯಂತರ ಮತ್ತು ಬಾಹ್ಯ ಎಂದು. ಅವುಗಳಲ್ಲಿ 4 ಮತ್ತು 11 ಭೇದಗಳಿವೆ.

ಗಮನಿಸಿರಿ :

1. ಕೆಳಗಿನ ಶ್ಲೋಕದಲ್ಲಿ ಕ್ರಮವಾಗಿ ಇರುವ ವ್ಯಂಜನಗಳನ್ನು ಗುರುತಿಸಿರಿ :
कः खगौ घाङचिच्छौजा झञ्ञोटोठी डढण्ढणः।
तथो दधीन् पफर्बाभीर्मयोरि ल्वाशिषांसहः ॥

(ಗ್ರಂಥವಿಸ್ತಾರ ಭಯದಿಂದ ಇಂತಹ ಶ್ಲೋಕಗಳ ವಿವರಣೆಯನ್ನು ಇಲ್ಲಿ ಕೊಡಲಾಗುವದಿಲ್ಲ)

2. ಕೆಳಗಿನ ಶ್ಲೋಕದಲ್ಲಿ ಓಷ್ಠ್ಯ ವರ್ಣವಿರುವದಿಲ್ಲ.
नयनानन्द जनने नक्षत्रगणशालिनि।
अघने गगने दृष्टिरंगने दीयतां सकृत्॥

3. ಕೆಳಗಿನ ಶ್ಲೋಕದಲ್ಲಿ ಮೂರ್ಧನ್ಯ ವರ್ಣವಿಲ್ಲ.
शलभा इव धावन्तः सायकास्तस्य भूभुजः।
निपेतुः सायकच्च्छन्नास्तेन संयुगसीमनि ॥

4. ಈ ಶ್ಲೋಕದಲ್ಲಿ ಓಷ್ಠ್ಯ ಮತ್ತು ಮೂರ್ಧನ್ಯ ಎರಡೂ ಅಕ್ಷರಗಳಿಲ್ಲ.
अलिनीलालकलतं कं न हन्ति घनस्तनी ।
आननं नलिनच्छाय नयनं शशिकान्ति ते ॥

5. ವ್ಯಂಜನದ ಜೊತೆಗಿರುವ ಸ್ವರವನ್ನು ಈ ಶ್ಲೋಕದಲ್ಲಿ ಗಮನಿಸಿರಿ.
तापेनोग्रोऽस्तु देहे नो हेयेविल्लोभि निन्दिना।
जायाग्रे हि गुणिप्रेष्ठा हितोऽक्षेपोऽमृतोक्षिणी ॥

6. ಅ ಕಾರದ ಹೊರತಾಗಿ ಸ್ವರವೇ ಇಲ್ಲದ ಕೆಳಗಿನ ಶ್ಲೋಕವನ್ನು ಗಮನಿಸಿರಿ.
तमनग्रस्त दहन हयवल्लभनन्दन ।
जय ग्रहगणप्रष्ठ हतक्षप मतक्षप ॥

7. ಕೆಳಗಿನ ಪ್ರತ್ಯಾಹಾರಗಳನ್ನು ಗುರುತಿಸಿರಿ.
अक्, इक्, अच्, यण्, झल्, खर्, जश्, एच्, ऐच्, एङ्



## ವರ್ಣಗಳ ಉಗಮಸ್ಥಾನ ಮತ್ತು ವಿವರಣೆ

| ಸ್ವರಗಳು | | ವ್ಯಂಜನಗಳು | | | | | | | | ಉಗಮ ಸ್ಥಾನ |
|---|---|---|---|---|---|---|---|---|---|---|
| | | ಕರ್ಕಶ (ಖರ್) | | | ಮೃದು (ಹಶ್) | | | | | |
| ಹ್ರಸ್ವ | ದೀರ್ಘ | ಊಷ್ಮ ವರ್ಣ | ಅಲ್ಪ ಪ್ರಾಣ | ಮಹಾ ಪ್ರಾಣ | ಅಲ್ಪ ಪ್ರಾಣ | ಮಹಾ ಪ್ರಾಣ | ಅನುನಾಸಿಕ | ಅಂತಸ್ಥ ವರ್ಣ | ಊಷ್ಮವರ್ಣ ಮಹಾಪ್ರಾಣ | |
| अ | आ | | क् | ख् | ग् | घ् | ङ् | | ह् | ಕಂಠ |
| इ | ई | श् | च् | छ् | ज् | झ् | ञ् | य् | | ತಾಲು |
| ऋ | ॠ | ष् | ट् | ठ् | ड् | ढ् | ण् | र् | | ಮೂರ್ಧಾ |
| लृ | | स् | त् | थ् | द् | ध् | न् | ल् | | ದಂತ |
| उ | ऊ | | प् | फ् | ब् | भ् | म् | | | ಓಷ್ಠ |
| | ए ऐ | | | | | | | | | ಕಂಠ ತಾಲು |
| | ओ औ | | | | | | | | | ಕಂಠ ಓಷ್ಠ |
| | | | | | | | | व् | | ದಂತ ಓಷ್ಠ |

# ಅಧ್ಯಾಯ ೨
# ಸಂಧಿಗಳು

ಎರಡು ವರ್ಣಗಳು ಕೆಲವು ನಿಯಮಗಳಿಗನುಸರಿಸಿ ಕೂಡಿಕೊಳ್ಳುವುದೇ ಸಂಧಿ. ಹೀಗೆ ಕೂಡಿದಾಗ ಅವುಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಈ ಕ್ರಿಯೆಗೆ ಸಂಧಿಕ್ರಿಯೆ ಎನ್ನುವರು. ಉದಾ-रमा + ईश=रमेश ಇಲ್ಲಿ रमा ಶಬ್ದದ ಕೊನೆಗಿರುವ आ ಮತ್ತು ईश ಶಬ್ದದ ಮೊದಲಿನ ई ಇವು ಕೂಡಿ ए ಎಂದು ಬದಲಾವಣೆ ಹೊಂದಿವೆ. ಈ ಬದಲಾವಣೆಯು ಮೂರು ತರಹದ್ದು.

1) ಆದೇಶ - शत्रुवदादेशः-ಅಂದರೆ ಶತ್ರುವು ತನ್ನ ವೈರಿಯನ್ನು ಹೊಡೆದೋಡಿಸಿ ತಾನು ಸಿಂಹಾಸನದ ಮೇಲೆ ಬಂದು ಕೂಡುವಂತೆ ಆದೇಶವಾಗಿ ಬರುವ ವರ್ಣವು ಅಲ್ಲಿದ್ದ ವರ್ಣಗಳನ್ನು ಹಾರಿಸಿ ತಾನು ಬಂದು ಕೂಡುವದು. ಉದಾ-शीत+उदकं=शीतोदकम् ಇಲ್ಲಿ त ದಲ್ಲಿಯ अ ಮತ್ತು उ ಇವೆರಡೂ ಹೋಗಿ ओ ಆದೇಶವಾಗಿ ಬಂದಿದೆ.

2) ಆಗಮ - मित्रवदागमः-ಅಂದರೆ ಗೆಳೆಯನು ಬಂದರೆ ಬಸ್ಸಿನಲ್ಲಿ ನಾವು ಕುಳಿತ ಆಸನದ ಮೇಲೆ ಅವನಿಗೂ ಕುಳಿತುಕೊಳ್ಳಲು ಸಹಕರಿಸುವದು. ಇದರಂತೆ ಇರುವ ವರ್ಣಗಳ ಜೊತೆ ಮತ್ತೊಂದು ವರ್ಣ ಸೇರುವದು. ಉದಾ-वृक्ष+छाया=वृक्षच्छाया ಇಲ್ಲಿ च् ಆಗಮವಾಗಿದೆ.

3) ಲೋಪ - (नष्टद्रव्यवत् लोपः) ಇದ್ದ ವರ್ಣವೇ ಇಲ್ಲದಂತಾಗುವದು. ಉದಾ- सः याति=स याति ಇಲ್ಲಿ ವಿಸರ್ಗ ಲೋಪವಾಗಿದೆ.

ಸಾಮಾನ್ಯವಾಗಿ ಸಂಧಿಗಳಲ್ಲಿ ಮೂರು ವಿಧ. 1) ಸ್ವರಸಂಧಿ (अच्सन्धिः), 2) ವ್ಯಂಜನಸಂಧಿ (हल्सन्धिः) 3) ವಿಸರ್ಗಸಂಧಿ.

ಸ್ವರಸಂಧಿಗಳಲ್ಲಿ ಮುಖ್ಯವಾಗಿ ಎಂಟು ವಿಧ. 1) ಸವರ್ಣದೀರ್ಘಸಂಧಿ 2) ಗುಣಸಂಧಿ 3) ವೃದ್ಧಿಸಂಧಿ 4) ಯಣ್‌ಸಂಧಿ 5) ಯಾಂತಾದೇಶ ವಾಂತಾದೇಶಸಂಧಿ 6) ಪೂರ್ವರೂಪಸಂಧಿ 7) ಪರರೂಪಸಂಧಿ 8) ಪ್ರಕೃತಿಭಾವಸಂಧಿ.

1) ಸವರ್ಣದೀರ್ಘಸಂಧಿ - (अकः सवर्णे दीर्घः-पा.सूत्र) ಸಾಮಾನ್ಯವಾಗಿ ಪ್ರಯತ್ನ ಮತ್ತು ಉತ್ಪತ್ತಿ ಸ್ಥಾನವು ಒಂದೇ ಇರುವ ವರ್ಣಗಳು ಸವರ್ಣಗಳು. अ ಮತ್ತು आ ಇವು ಪರಸ್ಪರ ಸವರ್ಣಗಳು. ಹೀಗೆಯೇ इ-ई, उ-ऊ, ऋ-ॠ ಇವು ಸವರ್ಣಗಳು. ಹ್ರಸ್ವವೇ ಆಗಲಿ ದೀರ್ಘವಾಗಲಿ ಇವು ಪರಸ್ಪರ ಬಂದಾಗ ಅವುಗಳ ದೀರ್ಘಾಕ್ಷರವು ಆದೇಶವಾಗಿ ಬರುತ್ತದೆ. ಆದ್ದರಿಂದ ಇದು ಸವರ್ಣದೀರ್ಘಸಂಧಿ.

अ ಅಥವಾ आ ಮುಂದೆ अ ಅಥವಾ आ ಬಂದರೆ आ ಆದೇಶವಾಗುವದು. ಹೀಗೆಯೇ ಉಳಿದ ಸವರ್ಣಗಳು (ಸ್ವರಗಳು). ಉದಾ-देव+आदेशः=देवादेशः ಇಲ್ಲಿ व

ದಲ್ಲಿಯ अ ಮತ್ತು आ ಇವೆರಡೂ ಹೋಗಿ आ ಆದೇಶವಾಗಿದೆ. ಹೀಗೆ ಆದೇಶವಿದ್ದಲ್ಲಿ ತಿಳಿಯುವದು. विद्या+आतुरः=विद्यातुरः ಹೀಗೆಯೇ हिमाद्रिः, देवालयः, पीताम्बरम्। कपि+ईशः=कपीशः। ಹೀಗೇ करीन्द्रः, श्रीशः,गिरीशः। वधू+उपदेशः =वधूपदेशः। ಹೀಗೆಯೇ भानूदयः, गुरूहा, लघूर्मिः (ಸಣ್ಣತೆರೆ) पितृ+ऋणम्=पितृणम् ಹೀಗೆಯೇ भ्रातृणं, होतृणम्।

ऌ ಕಾರಕ್ಕೆ ದೀರ್ಘರೂಪವಿಲ್ಲ. ऋ ऌ वर्णयोः सावर्ण्यं वाच्यम् ಎಂಬಂತೆ ऌ ऋ ಕಾರವಾಗಿ ಬದಲಾಗುವದು. ऋ ಮತ್ತು ऌ ಸವರ್ಣವಾಗಿ ॠ ದೀರ್ಘ ಬರುತ್ತದೆ. होतृ+ऌकारः=होतॄकारः

2) ಗುಣಸಂಧಿ - (आद्गुणः) अ, आ ಇವುಗಳ ಮುಂದೆ इ, ई ಬಂದರೆ ए ಕಾರವು, उ,ऊ ಬಂದರೆ ओ ಕಾರವು, ऋ, ॠ ಬಂದರೆ अर् ಕಾರವು ಆದೇಶವಾಗುತ್ತದೆ, ऌ ಬಂದರೆ अल् ಕಾರವು ಆದೇಶವಾಗುತ್ತದೆ. ಉದಾ-देव+इन्द्रः=देवेन्द्रः, रमा+ईशः=रमेशः, जन+उक्तिः=जनोक्तिः, गङ्गा+उदकं=गङ्गोदकं, रम्भा+ऊरुः=रम्भोरुः, देव+ऋषिः=देवर्षिः, राजा+ऋषिः=राजर्षिः, तव+ऌकारः=तवल्कारः।

3) ವೃದ್ಧಿಸಂಧಿ - (वृद्धिरेचि) अ,आ ಕಾರಗಳ ಮುಂದೆ ए ಅಥವಾ ऐ ಬಂದರೆ ऐ ಕಾರವೂ, ओ ಅಥವಾ औ ಬಂದರೆ औ ಕಾರವೂ ಆದೇಶವಾಗುತ್ತದೆ. ಉದಾ-एक+एकः=एकैकः, मत+ऐक्यं=मतैक्यं, महा+ऐश्वर्यं=महैश्वर्यम्, जल+ओघः=जलौघः, दिव्या+औषधिः=दिव्यौषधिः।

4) ಯಣ್‌ಸಂಧಿ - (इकोयणचि) इक् स्थाने अचि परे यण् स्यात्। इक् ಎಂದರೆ इ उ ऋ ऌ (प्रत्याहार) ಇವುಗಳಿಗೆ अच् ಎಂದರೆ ಇಲ್ಲಿ ಅಸವರ್ಣ ಸ್ವರ ಬಂದರೆ यण् ಎಂದರೆ य् व् र् ल् ಇವು ಆದೇಶವಾಗಿ ಬರುವವು. इ ई उ ऊ ऋ ॠ ऌ ಕಾರಗಳ ಮುಂದೆ ಅಸವರ್ಣ ಸ್ವರ ಬಂದರೆ इ ई ಕಾರಗಳಿಗೆ य् ಆದೇಶವಾಗಿಯೂ, उ ऊ ಕಾರಗಳಿಗೆ व् ; ऋ ॠ ಕಾರಗಳಿಗೆ र् ಮತ್ತು ऌ ಕಾರಕ್ಕೆ ल् ಆದೇಶವಾಗಿ ಬರುತ್ತದೆ. ಮುಂದಿನ ಸ್ವರಗಳೊಂದಿಗೆ ಸೇರಿ ಪೂರ್ಣಾಕ್ಷರಗಳಾಗುತ್ತವೆ.ಉದಾ- इति+उक्त्वा=इत्युक्त्वा ಇಲ್ಲಿ ति ದಲ್ಲಿರುವ इ ಕಾರದ ಮುಂದೆ ಅಸವರ್ಣವಾದ उ ಬಂದಿದೆ. इ ಹೋಗಿ य् ಬಂದಿದೆ. इत्+य्+उक्त्वा=त्यु ಪೂರ್ಣಾಕ್ಷರವಾಗಿ इत्युक्त्वा ಎಂದಾಗಿದೆ. गति+अन्तरं=गत्यन्तरम्, श्रुति+ऐक्यं=श्रुत्यैक्यम्, त्+इ+ऐ ಇಲ್ಲಿ इ ಹೋಗಿ य् ಬಂದು ऐ ಸೇರಿದೆ. (त्यै)। प्राणि+अङ्गं=प्राण्यङ्गम्, रति+औत्सुक्यम्=रत्यौत्सुक्यम्, भवतु+इति=भवत्विति ಇಲ್ಲಿ उ ಕಾರವು ಹೋಗಿ व्

ಆದೇಶವಾಗಿ ಮುಂದಿನ इ ಸೇರಿ त्+व्+इ=त्वि ಆಗಿದೆ. खलु+इदम्=खल्विदम्, मधु+अरि=मध्वरि, वस्तु+ऐक्यम्=वस्त्वैक्यम्, साधु+ओदनम्=साध्वोदनम्, पितृ+आज्ञा=पित्राज्ञा, धातृ+उद्यानम्=धात्रुद्यानम्, लृ+आकृतिः=लाकृतिः।

5) **ಪೂರ್ವರೂಪಸಂಧಿ** - (एङः पदान्तादति) ए ಮತ್ತು ओ ಕಾರಗಳ ಮುಂದೆ अ ಸ್ವರವು ಬಂದರೆ ಅದಕ್ಕೆ ಬದಲಾಗಿ ಅವಗ್ರಹ (ऽ) ಬರುತ್ತದೆ. अ ಲೋಪವಾಗುತ್ತದೆ. नगरे+ अस्मिन् =नगरेऽस्मिन्, भवने+अस्ति=भवनेऽस्ति, विष्णो+अत्र=विष्णोऽत्र।

6) **ಯಾಂತಾವಾಂತಾದೇಶಸಂಧಿ** - (एचोऽयवायावः) ए ओ ಗಳ ಮುಂದೆ अ ಹೊರತು ಪಡಿಸಿ ಬೇರೆ ಸ್ವರ ಬಂದರೆ ए ಇದು ಹೋಗಿ अय् ಎಂದೂ, ओ ಹೋಗಿ अव् ಎಂದೂ ಆದೇಶವಾಗುವದು. ಮುಂದಿನ ಸ್ವರದಿಂದ ಸೇರಿ ಪೂರ್ಣಾಕ್ಷರವಾಗುತ್ತದೆ ಅಥವಾ य् व् ಗಳು ಲೋಪವಾಗಿ ಉಳಿದ ಸ್ವರಗಳು ಸಂಧಿಯಾಗುತ್ತವೆ. ಉದಾ-वने+उषितवान् =वन उषितवान् अथवा वनयुषितवान्, आश्रमे+ऋषि=आश्रम ऋषिः अथवा आश्रमयृषिः, प्रभो+इह=प्रभविह ಅಥವಾ प्रभ इह।

ए ಮತ್ತು औ ಗಳ ಮುಂದೆ ಯಾವುದೇ ಸ್ವರ ಬಂದರೆ ಅವು ಕ್ರಮವಾಗಿ आय् ಮತ್ತು आव् ಎಂದಾಗುತ್ತವೆ. य् ಮತ್ತು व् ಇವು ಮುಂದಿನ ಸ್ವರದೊಂದಿಗೆ ಸೇರಿ ಪೂರ್ಣಾಕ್ಷರಗಳಾಗುತ್ತವೆ. ಅಥವಾ ऐ औ ಇವು ಲೋಪವಾಗುತ್ತವೆ. ಉದಾ- कस्मै+इदम्=कस्मायिदम् ಅಥವಾ कस्मा इदम्, नै+अकः=नायकः, वृक्षौ+एतौ=वृक्षावेतौ ಅಥವಾ वृक्षा एतौ, कलौ+इति=कलाविति ಅಥವಾ कला इति।

ವಿ.ಸೂ. : (ಯಾಂತಾವಾಂತಾದೇಶ ಸಂಧಿಗೆ ಪೂರ್ವರೂಪ ಸಂಧಿಯು ಅಪವಾದವಾಗಿದೆ.)

7) **ಪ್ರಕೃತಿಭಾವಸಂಧಿ** - 1) ए ओ ಇವು ಕೊನೆಗಿರುವ ಉದ್ಗಾರವಾಚಕ ಶಬ್ದಗಳ ಮುಂದೆ ಯಾವುದೇ ಸ್ವರ ಬಂದರೆ ಸಂಧಿಯಾಗುವದಿಲ್ಲ. ಸಂಧಿಯಾಗದೇ ಉಳಿಯುವದೆ ಪ್ರಕೃತಿಭಾವ. ಉದಾ- हे-अग्ने, अहो इन्द्र

2) ಮೂರು ಮಾತ್ರಾ ಕಾಲಾವಕಾಶವಿರುವ ಸ್ವರಕ್ಕೆ ಪ್ಲುತ ಎನ್ನುತ್ತಾರೆ. (त्रिमात्रस्तु प्लुतो ज्ञेयः) ई ಕಾರಾಂತ, उ ಕಾರಾಂತ ಮತ್ತು ए ಕಾರಾಂತ ದ್ವಿವಚನ ಶಬ್ದಗಳ ಅಂತ್ಯಸ್ವರಗಳಿಗೆ ಪ್ರಗೃಹ್ಯ (ईदूदेद्विवचनं प्रगृह्यम्) ಎನ್ನುತ್ತಾರೆ. ಪ್ಲುತ ಮತ್ತು ಪ್ರಗೃಹ್ಯಗಳ ಮುಂದೆ ಸ್ವರ ಬಂದರೆ ಸಂಧಿಯಾಗುವದಿಲ್ಲ. एहि कृष्णऽऽऽ+अत्र ಇಲ್ಲಿ ಸಂಬೋಧನೆಯ कृष्ण ಶಬ್ದದ ಕೊನೆಯ अ ಪ್ಲುತವಾಗಿದೆ. कवी आगतौ, फले ईहते, बन्धू आयातौ, नमेते आर्यम्।

3) अदस् ಸರ್ವನಾಮ ಶಬ್ದದ ಪುಲ್ಲಿಂಗ ಪ್ರಥಮಾ ಬಹುವಚನದ ರೂಪ अमी ಇದರ ಮುಂದೆ ಯಾವ ಸ್ವರ ಬಂದರೂ ಸಂಧಿಯಾಗುವದಿಲ್ಲ.(अदसोमात्) ಇದರ ಕೊನೆಯ ई ಕಾರವೂ ಪ್ರಗೃಹ್ಯ. अमी अग्नयः, अमी ईश्वराः।

ई ॠ ॡ ಇವುಗಳ ಮುಂದೆ ಅಸವರ್ಣ ಸ್ವರಗಳು ಬಂದರೆ ಯಣ್ ಸಂಧಿಯೂ ಆಗಬಹುದು. ಪ್ರಕೃತಿಭಾವ ಸಂಧಿಯೂ ಆಗಬಹುದು. ಈ ದೀರ್ಘಸ್ವರಗಳು ಹ್ರಸ್ವಸ್ವರಗಳೂ ಆಗಬಹುದು. ಉದಾ- योगी+आनन्द=योग्यानन्द ಅಥವಾ योगी-आनन्द ಅಥವಾ योगि आनन्द।

2) ವ್ಯಂಜನಸಂಧಿಗಳು (हल्सन्धिः)

ವ್ಯಂಜನದ ಮುಂದೆ ವ್ಯಂಜನ ಅಥವಾ ಸ್ವರ ಬಂದರೆ ವ್ಯಂಜನಸಂಧಿಯಾಗುವದು. ಇದರಲ್ಲಿ 1) ಅನುಸ್ವಾರ ಸಂಧಿ, 2) ಅನುನಾಸಿಕ ಸಂಧಿ, 3) ಶ್ಚುತ್ವ ಸಂಧಿ, 4) ಷ್ಟುತ್ವ ಸಂಧಿ, 5) ಜಶ್ತ್ವ ಸಂಧಿ, 6) ಪರಸವರ್ಣ ಸಂಧಿ ಮತ್ತು 7) ಙ್ಮುಡಾಗಮಸಂಧಿ ಇವು ಪ್ರಮುಖವಾಗಿವೆ.

**I)** ಅನುಸ್ವಾರ ಸಂಧಿ - ಶಬ್ದದ ಕೊನೆಗೆ ಇರುವ म् ದ ಮುಂದೆ ವರ್ಗೀಯ ವ್ಯಂಜನ ಬಂದರೆ म् ಅನುಸ್ವಾರವಾಗುತ್ತದೆ ಅಥವಾ ಅದರ ಸ್ಥಾನದಲ್ಲಿ ಆ ವರ್ಗದ ಅನುನಾಸಿಕವು ಬರುತ್ತದೆ. ಉದಾ-मन्त्रम्+पठति=मन्त्रं पठति ಅಥವಾ मन्त्रम्पठति। श्लोकम्+गायति=श्लोकं गायति ಅಥವಾ श्लोकङ्गायति।

2) ಪದಾಂತ್ಯದಲ್ಲಿರುವ म् ದ ಮುಂದೆ ಅವರ್ಗೀಯ ವ್ಯಂಜನ ಬಂದರೆ ಸಾಮಾನ್ಯವಾಗಿ म् ಅನುಸ್ವಾರವಾಗುತ್ತದೆ. रामम्+वन्दे=रामं वन्दे, नगरम्+याति=नगरं याति।

3) ವಾಕ್ಯದ ಕೊನೆಗೆ म् ಬಂದರೆ ಹಾಗೆಯೇ ಉಳಿಯುತ್ತದೆ. इति शिवम्।

**II)** ಅನುನಾಸಿಕ ಸಂಧಿ - 1) ಪದಾಂತ್ಯದಲ್ಲಿರುವ ವರ್ಗೀಯ ವ್ಯಂಜನದ (ಅನುನಾಸಿಕ ङ् ञ् ण् न् म् ಬಿಟ್ಟು) ಮುಂದೆ ಅನುನಾಸಿಕವು ಬಂದರೆ ಆ ವ್ಯಂಜನಕ್ಕೆ ಬದಲಾಗಿ ಆ ವರ್ಗದ ಅನುನಾಸಿಕವು ಬರುತ್ತದೆ ಅಥವಾ ಮೂರನೆಯ ವ್ಯಂಜನವು ಬರುತ್ತದೆ. सत्यवाक्+ मनुते=सत्यवाङ्मनुते ಅಥವಾ सत्यवाग्मनुते, षट्+मुखानि=षण्मुखानि ಅಥವಾ षड्मुखानि, तत्+नेत्रं =तन्नेत्रम् ಅಥವಾ तद्नेत्रम्।

ಆದರೆ ಪದದ ಕೊನೆಗಿರುವ ವರ್ಗೀಯ ವ್ಯಂಜನದ ಮುಂದೆ मय ಮತ್ತು मात्र ಪ್ರತ್ಯಯಗಳು ಬಂದರೆ ಅದು ಆ ವರ್ಗದ ಅನುನಾಸಿಕವೇ ಆಗುತ್ತದೆ. वाक्+मयम्=वाङ्मयम्, चित्+मात्रम्=चिन्मात्रम्।

**III)** ಶ್ಚುತ್ವಸಂಧಿ - (स्तोः श्चुना श्चुः) स् ಮತ್ತು त ವರ್ಗ ವ್ಯಂಜನಗಳ ಮುಂದೆ श् ಮತ್ತು चवर्ग ವ್ಯಂಜನಗಳು ಬಂದರೆ स् ಕಾರಕ್ಕೆ श् ಕಾರವೂ, त् द् ध् न् ಗಳಿಗೆ ಕ್ರಮವಾಗಿ च् ज् झ् ञ् ಗಳು ಆದೇಶವಾಗಿ ಬರುವವು.

वायुः+चलति=वायुस्चलति=वायुश्चलति, शैलात्+जलम्= शैलाद्जलम् =शैलाज्जलम्, एतान्+जनान्=एताञ्जनान्, ग्रामात्+चोरः=ग्रामाच्चोरः, बालः+ शेते=बालश्शेते।

IV) ಷ್ಟುತ್ವಸಂಧಿ - स् ಮತ್ತು तवर्ग ವ್ಯಂಜನಗಳ ಮುಂದೆ ष् ಮತ್ತು टवर्ग ವ್ಯಂಜನಗಳು ಬಂದರೆ स ಕಾರಕ್ಕೆ ष् ಕಾರವೂ त् द् ध् न् ಗಳಿಗೆ ट् ड् ढ् ण् ಗಳು ಆದೇಶವಾಗುತ್ತವೆ. मनस्+षष्टः=मनष्षष्ठः, तत्+टीका=तट्टीका, महान्+डिण्डिमः= महाण्डिण्डिमः।

V) ಜಶ್ತ್ವಸಂಧಿ - (झलां जशोऽन्ते) ಶಬ್ದದ ಕೊನೆಗೆ ಅನುನಾಸಿಕ ಬಿಟ್ಟು ಬೇರೆ ಯಾವದೇ ವರ್ಗೀಯ ವ್ಯಂಜನವಿದ್ದು ಅದರ ಮುಂದೆ ಸ್ವರವಾಗಲೀ ಮೃದುವ್ಯಂಜನವಾಗಲೀ (ವರ್ಗದ ಕೊನೆಯ 4 ವರ್ಣಗಳು ಎಲ್ಲ ಅವರ್ಗೀಯ ವ್ಯಂಜನಗಳು) ಬಂದರೆ ಆ ಕೊನೆಯ ವ್ಯಂಜನಕ್ಕೆ ಬದಲಾಗಿ ಅದರ ವರ್ಗದ ಮೂರನೆಯ ವರ್ಣವು ಬರುತ್ತದೆ. ಉದಾ-गृहात्+आगच्छति= गृहादागच्छति, वाक्+अर्थः=वागर्थः, षट्+अङ्गाः=षडङ्गाः, अप्+ईशः=अबीशः।

2) ಪದಾಂತ್ಯದಲ್ಲಿ ಅನುನಾಸಿಕ ಬಿಟ್ಟು ಯಾವುದೇ ವ್ಯಂಜನವಿದ್ದು ಮುಂದೆ ಕರ್ಕಶ ವರ್ಣಗಳು ಬಂದರೆ (ವರ್ಗದ ಮೊದಲಿನ ಎರಡು ವರ್ಣಗಳು ಮತ್ತು श् ष् स् ह्) ಆ ಕೊನೆಯ ವ್ಯಂಜನದ ಬದಲಾಗಿ ಆ ವರ್ಗದ ಮೊದಲನೆಯ ವರ್ಣ ಆದೇಶವಾಗುತ್ತದೆ. उद्+तारयति=उत्तारयति, समिध्+पाणिः=समित्पाणिः, दिग्+पालः=दिक्पालः

VI) ಪರಸವರ್ಣಸಂಧಿ -1) ಕೊನೆಯಲ್ಲಿರುವ न् ಕಾರದ ಮುಂದೆ ಬಂದ ल् ವರ್ಣವು ಅನುನಾಸಿಕದಿಂದ ಕೂಡುತ್ತದೆ. ಉದಾ-तस्मिन्+लोकाः=तस्मिँल्लोकाः, महान्+लाभः=महाँल्लाभः।

2) ಶಬ್ದದ ಕೊನೆಗಿದ್ದ न् ದ ಮುಂದೆ च् छ् ट् ठ् त् थ् ಬಂದರೆ ಅದಕ್ಕೆ ಬದಲಾಗಿ ಅನುಸ್ವಾರ ಮತ್ತು ವಿಸರ್ಗಗಳು ಬರುತ್ತವೆ. ಅಲ್ಲದೆ च् छ्, ट् ढ् ಮತ್ತು त् थ् ಇವುಗಳ ಹಿಂದಿನ ವಿಸರ್ಗವು ಕ್ರಮವಾಗಿ श् ष् स् ಆಗುತ್ತವೆ. ಉದಾ-वृक्षान्+चालयति=वृक्षांश्चालयति, भक्तान्+तारयति=भक्तांस्तारयति, महान्+टीकाकार=महांष्टीकाकार।

3) ಪದಾಂತ್ಯದಲ್ಲಿರುವ न् ದ ಮುಂದೆ श् ಬಂದರೆ ಅವು ಕ್ರಮವಾಗಿ ञ् ಮತ್ತು छ् ಆಗುತ್ತವೆ. ಉದಾ-भोगान्+शमयति=भोगाञ्छमयति ಅಥವಾ भोगाञ्शमयति, बालान्+शिक्षयति =बालाञ्शिक्षयति ಅಥವಾ बालाञ्छिक्षयति।

4) न् ದ ಮುಂದೆ ज् झ् ಗಳು ಬಂದರೆ न् ವು ञ् ಆಗುತ್ತದೆ. ಉದಾ-वीरान्+जयति= वीराञ्जयति, महान्+झंझावातः=महाञ्झंझावातः।

5) ಪದಾಂತ್ಯದ त् ದ ಮುಂದೆ ल् ಬಂದರೆ त् ವು ल् ಆಗುತ್ತದೆ. ಉದಾ- तत्+लाभः=तल्लाभः, दूरात्+लक्ष्यम्=दूराल्लक्ष्यम्।

6) त् ದ ಮುಂದೆ श् ಬಂದರೆ त् ವು च् ಆಗುತ್ತದೆ. श् ವು ವಿಕಲ್ಪದಿಂದ छ ಆಗುತ್ತದೆ. ಉದಾ- देहात्+शिरः=देहाच्शिरः ಅಥವಾ देहाच्छिरः, जगत्+शून्यं=जगच्छून्यम् ಅಥವಾ जगच्शून्यम्।

7) ಅನುನಾಸಿಕ ಬಿಟ್ಟು ವರ್ಗೀಯ ವ್ಯಂಜನದ ಮುಂದೆ ह ಬಂದರೆ ह ಕ್ಕೆ ವಿಕಲ್ಪದಿಂದ ಆ ವರ್ಗದ ನಾಲ್ಕನೆಯ ವರ್ಣ ಬರುತ್ತದೆ. ಉದಾ-तत्+हरणम्=तद्धरणम् ಅಥವಾ तद्हतम्, भूभृत्+ हन्ति=भूभृद्हन्ति ಅಥವಾ भूभृद्धन्ति, सम्यक्+हयः=सम्यग्हयः ಅಥವಾ सम्यग्घयः।

**VII)** ಙ್ಮುಡಾಗಮಸಂಧಿ-ಪದಾಂತ್ಯದಲ್ಲಿರುವ ङ् ण् न् ಇವುಗಳ ಪೂರ್ವವರ್ಣವು ಹ್ರಸ್ವಸ್ವರವಿದ್ದು ಮುಂದೆ ಯಾವುದೇ ಸ್ವರ ಬಂದರೆ ಅವು ದ್ವಿತ್ವವಾಗುವವು.ಉದಾ-प्रत्यङ्+ आत्मा =प्रत्यङ्ङात्मा, सुगण्+ईशः=सुगण्णीशः, कस्मिन्+ आश्रयः = कस्मिन्नाश्रयः।

ಆದರೆ न् ದ ಹಿಂದೆ ದೀರ್ಘಸ್ವರವಿದ್ದು ಮುಂದೆ ಯಾವುದೇ ಸ್ವರ ಬಂದರೆ ಅವೆರಡೂ ಕೂಡಿ ಪೂರ್ಣಾಕ್ಷರವಾಗುತ್ತದೆ. ಉದಾ-महान्+आत्मा=महानात्मा, मुनीन्+अनमत् = मुनीननमत्, गुरून्+अवदत्=गुरूनवदत्।

3) ವಿಸರ್ಗ ಸಂಧಿಗಳು

ವಿಸರ್ಗದ ಮುಂದೆ ಸ್ವರ ಅಥವಾ ವ್ಯಂಜನ ಬಂದು ಅವುಗಳನ್ನು ಕೂಡಿಸುವಾಗ ಆಗುವ ಬದಲಾವಣೆಯೇ ವಿಸರ್ಗಸಂಧಿ. ಇವುಗಳ ಪ್ರಮುಖ ಪ್ರಭೇದಗಳನ್ನು ನೋಡೋಣ.

1) ವಿಸರ್ಗದ ಮುಂದೆ च् छ्, ट् ठ् ಮತ್ತು त् थ् ಈ ವ್ಯಂಜನಗಳು ಬಂದಾಗ ವಿಸರ್ಗವು ಕ್ರಮವಾಗಿ श् ष् स् ಆಗುತ್ತದೆ. (ವಿಸರ್ಗವು ಮೊದಲು स् ಆಗಿ ನಂತರ ಸಾಮಾನ್ಯವಾಗಿ श्चुत्व ಮತ್ತು ष्टुत्व ಸಂಧಿಯ ನಿಯಮದಂತೆ ಬದಲಾಗುತ್ತವೆ.) ಉದಾ-गावः+चरन्ति= गावश्चरन्ति, लताः+छिद्यन्ते=लताश्छिद्यन्ते, पण्डितः+टीकते= पण्डितष्टीकते, प्राणिनः+तरन्ति=प्राणिनस्तरन्ति।

2) ವಿಸರ್ಗದ ಮುಂದೆ क् ख्, प् फ् ಮತ್ತು श् ष् स् ಈ ವ್ಯಂಜನಗಳು ಬಂದರೆ ವಿಸರ್ಗ ಹಾಗೆ ಉಳಿಯುತ್ತದೆ ಅಥವಾ श् ष् स् ಬಂದಾಗ ವಿಸರ್ಗವು श् ष् स् ಆಗುತ್ತದೆ.ಉದಾ- पुष्पैः किं, सेवकः खनति, पशुः पश्यति, वृक्षः फलति। हरिःशेते, हरिश्शेते; बालाःषट्, बालाष्षट्; सर्पःसृपति, सर्पस्सृपति।

(ವಿಸರ್ಗದ ಮುಂದೆ ಕ್ಷ್ ಬಂದರೆ ವಿಸರ್ಗವನ್ನು ಉಚ್ಚರಿಸುವಾಗ ಸಂಧಿ ಮಾಡದೆ ಬಿಡಿಸಿ ಉಚ್ಚರಿಸಬೇಕು.ಉದಾ-चन्द्रः क्षीयते।)

3) ವಿಸರ್ಗದ ಹಿಂದೆ अ ಇದ್ದು, ಮುಂದೆ अ ಅಥವಾ ಮೃದು ವ್ಯಂಜನಗಳು ಬಂದರೆ ವಿಸರ್ಗವು उ ಆಗಿ ಹಿಂದಿನ अ ದೊಂದಿಗೆ ಕೂಡಿ ओ ಆಗುತ್ತದೆ. ಮುಂದಿನ अ ದ ಬದಲು ಅವಗ್ರಹವು (ऽ) ಬರುತ್ತದೆ. बालः+अवदत्=बाल+उ+अवदत्=बालोऽवदत्, गजः+याति=गजो याति, जनकः+वदति=जनको वदति।

4) ವಿಸರ್ಗದ ಹಿಂದೆ अ ಇದ್ದು ಮುಂದೆ अ ಬಿಟ್ಟು, ಬೇರೆ ಸ್ವರ ಬಂದರೆ ವಿಸರ್ಗವು ಲೋಪವಾಗುತ್ತದೆ. सूर्यः+उदेति=सूर्य उदेति, देवः+ईक्षते=देव ईक्षते।

5) ವಿಸರ್ಗದ ಹಿಂದೆ आ ಇದ್ದು, ಮುಂದೆ ಯಾವುದೇ ಸ್ವರ ಅಥವಾ ಮೃದು ವ್ಯಂಜನ ಬಂದರೆ ವಿಸರ್ಗವು ಲೋಪವಾಗುತ್ತದೆ. बालाः+इच्छन्ति=बाला इच्छन्ति, मृगाः+वीक्षन्ते =मृगा वीक्षन्ते, गजाः+गच्छन्ति=गजा गच्छन्ति।

6) ವಿಸರ್ಗದ ಹಿಂದೆ अ, आ ಬಿಟ್ಟು, ಯಾವದೇ ಸ್ವರವಿದ್ದು ಮುಂದೆ ಸ್ವರವಾಗಲಿ, ಮೃದುವ್ಯಂಜನವಾಗಲಿ ಬಂದರೆ ವಿಸರ್ಗವು र् ಆಗುತ್ತದೆ. ಉದಾ-मुनिः+जपति=मुनिर्जपति, गुरुः+उपदिशति=गुरुरुपदिशति, धनैः+विना=धनैर्विना।

7) सः ಮತ್ತು एषः ಇವುಗಳ ಮುಂದೆ अ ಬಿಟ್ಟು, ಸ್ವರ ಅಥವಾ ವ್ಯಂಜನ ಬಂದರೆ ವಿಸರ್ಗ ಲೋಪವಾಗುತ್ತದೆ. (अ ಬಂದರೆ उ ಆಗಿ ಅವಗ್ರಹವಾಗುತ್ತದೆ.) ಉದಾ-सः+यच्छति= स यच्छति, एषः+लिखति=एष लिखति। (सः+अपि=सोऽपि)

8) भोस् ಅವ್ಯಯದ ಮುಂದೆ ಸ್ವರ ಅಥವಾ ಮೃದುವ್ಯಂಜನ ಬಂದರೆ स् ದಿಂದಾಗುವ ವಿಸರ್ಗವು ಲೋಪವಾಗುತ್ತದೆ. ಉದಾ-भोः+देवाः=भो देवाः, भोः+अग्ने =भो अग्ने।

9) ಶಬ್ದಾಂತ್ಯದಲ್ಲಿರುವ र् ದ ಮುಂದೆ ಕರ್ಕಶ ವ್ಯಂಜನವು ಬಂದರೆ ಅದು ವಿಸರ್ಗವಾಗುತ್ತದೆ. ಉದಾ-प्रातर्+स्मरणम्=प्रातःस्मरणम्, अन्तर्+प्रविष्टः=अन्तःप्रविष्टः, पुनर्+ शरणम्=पुनः शरणम्।

10) र् ದ ಮುಂದೆ ಮೃದುವ್ಯಂಜನ ಅಥವಾ ಸ್ವರ ಬಂದರೆ ಅದು ಬದಲಾಗುವದಿಲ್ಲ. ಉದಾ-पुनर्+जीवनम्=पुनर्जीवनम्, प्रातर्+उदेति=प्रातरुदेति।

11) र् ದ ಮುಂದೆ र ಬಂದರೆ र् ಲೋಪವಾಗಿ ಅದರ ಹಿಂದೆ ಇದ್ದ अ इ उ ಇವು ದೀರ್ಘವಾಗುತ್ತವೆ. ಉದಾ-अन्तर्+राष्ट्रिय=अन्ताराष्ट्रिय, अन्तर्+राज्य=अन्ताराज्य, हरिः+रक्षति=हरीरक्षति, भानुर्+राजते=भानूराजते।

**ಣತ್ವಾದೇಶ ನಿಯಮ : ಣತ್ವ ಮತ್ತು ಷತ್ವ ಗಳ ವಿಧಾನ**

1) ಒಂದೇ ಪದದಲ್ಲಿರುವ ऋ, ॠ, र् ಅಥವಾ ष् ಇವುಗಳ ಮುಂದೆ न् ಕಾರ ಬಂದರೆ ಅಥವಾ ಇವುಗಳ ಮಧ್ಯದಲ್ಲಿ (ಅಂದರೆ न् द ಹಿಂದೆ) ಸ್ವರಗಳು ಮತ್ತು क ಮತ್ತು प ವರ್ಗಗಳ ವ್ಯಂಜನಗಳು, ಅನುನಾಸಿಕಗಳು, ह य् व् र् ಗಳು ಬಂದರೂ न् ಕಾರವು ण ಆಗುತ್ತದೆ. राम+इन्=रामेण, करिणा, नरेण, पूष्णा ಇತ್ಯಾದಿ. नगर+आनि=नगराणि, चतुर्णाम् नृणां, गुरूणां, रामायणम्, प्रमाणम् आभूषणम् ಇತ್ಯಾದಿ. ಆದರೆ न् ಅಂತ್ಯವರ್ಣವಾದರೆ ण् ಆಗುವದಿಲ್ಲ. राम+आन्=रामान्, नरान्, गृहान् ಇತ್ಯಾದಿ. (ಹಾಗೆಯೇ ಮೊದಲನೆಯ ಪದದಲ್ಲಿ ऋ ॠ र् ಅಥವಾ ष ಇವು ಇದ್ದು ಮುಂದಿನ ಪದದಲ್ಲಿ न् ण ಆಗುವದಿಲ್ಲ. रघुनन्दन, सर्वनाम ಆದರೆ निष्पानम्, दुष्पानम् ಮುಂತಾದವುಗಳು ಅಪವಾದವಾಗಿವೆ.)

प्र, पूर्व, पर ಮತ್ತು अपर ಇವುಗಳ ಮುಂದಿನ अह्न ದಲ್ಲಿ न→ण ಆಗುತ್ತದೆ. पूर्वाह्णः, प्राह्णः, अपराह्णः ಇತ್ಯಾದಿ.

**ಷತ್ವಾದೇಶ ನಿಯಮ :**

1) अ आ ಬಿಟ್ಟು ಬೇರೆ ಸ್ವರಗಳ ಮುಂದೆ स् ಆದಿಯಾದ ವಿಭಕ್ತಿ ಪ್ರತ್ಯಯ ಬಂದರೆ स् ಕಾರವು ष् ಆಗುವದು. ಉದಾ-गुरु+सु=गुरुषु, हरिषु, नदीषु, देवेषु, (राजसु-ಇಲ್ಲಿ सु द ಹಿಂದೆ अ ಇದ್ದುದಕ್ಕೆ ष् ಆಗಿರುವದಿಲ್ಲ.)

2) क् ಮತ್ತು र् ದ ಮುಂದಿನ स्→ष् ಆಗುತ್ತದೆ. वाक्+सु=वाक्षु, चतुर्+सु=चतुर्षु।

3) अ आ ಬಿಟ್ಟು ಬೇರೆ ಸ್ವರಗಳು ಮತ್ತು स् ಆದಿಯಲ್ಲಿರುವ ಪ್ರತ್ಯಯ ಇವುಗಳ ನಡುವೆ ಅನುಸ್ವಾರ, ವಿಸರ್ಗ श् ष् स् ಗಳು ಬಂದರೂ ष् ಆಗುತ್ತದೆ. अर्चीम्+सि=अर्चींषि, धनूंषि, आयुषु, गोषु ಇತ್ಯಾದಿ.

4) ಸಮಾಸದ ಪೂರ್ವಪದವು इ ಕಾರಾಂತವಿದ್ದು ಉತ್ತರಪದವು स्था ಧಾತುವಿನ ರೂಪವಿದ್ದರೆ स→ष् ಆಗುತ್ತದೆ. युधि+स्थिरः=युधिष्ठिरः, गविष्ठिरः।

ವಿ.ಸೂ. : ಇದು ಒಂದೇ ಶಬ್ದದಲ್ಲಿ ಆಗುವ ಸಂಧಿ ಪ್ರಕರಣ (ಸ್ವಾದಿಸಂಧಿ)ದಲ್ಲಿ ಬಂದರೂ ಬಹಳೇ ಮಹತ್ತ್ವದ ನಿಯಮವೆಂದು ಇಲ್ಲಿ ಹೇಳಲಾಗಿದೆ.

इ ಮತ್ತು उ ಅಂತವಿರುವ ಉಪಸರ್ಗಗಳ ಮುಂದಿನ स्था, सिध्, सद्, सु, स्तु ಮುಂತಾದ ಧಾತುರೂಪಗಳ स्→ष्
प्रति+स्था=प्रतिष्ठा, निषेधः, उपनिषत्, अभिषेक, परिषेवन, अभिष्टुत ಇತ್ಯಾದಿ.

ಗಮನಿಸಿರಿ :

विकाशमीयुर्जगतीशमार्गणाः (किरातार्जुनीयं) - ಈ ಪಾದವೇ ಶ್ಲೋಕದ 4 ಪಾದಗಳಾಗಿವೆ. ಸಂಧಿಯ ವೈಶಿಷ್ಟ್ಯದಿಂದ ಅರ್ಥ ಬೇರೆ.

स्यन्दनानो च तुरगाः सुरेभावाविपत्तयः
" " "

न नोननुन्नो नुन्नो नो नाऽना नानानना ननु।
नुन्नोऽनुन्नो ननुन्नेनो नानेना नुन्न नुन्ननुत्।
ಈ ಏಕಾಕ್ಷರೀ ಶ್ಲೋಕದಲ್ಲಿ ಸಂಧಿವೈಶಿಷ್ಟ್ಯ ಗಮನಾರ್ಹವಾಗಿದೆ.

आदित्य चन्द्रावनिलोऽनलश्च
द्यौर्भूमिरापो हृदयं यमश्च ।
अहश्च रात्रिश्च उभे च सन्ध्ये
धर्मोऽपि जानाति नरस्य वृत्तम्।।

षत्व ಕ್ಕೆ ಉದಾ-

सर्वनारीगुणैः प्रष्ठां (श्रेष्ठां) विष्टरस्थां (दर्भासनस्थां) गविष्ठिराम् (वाचिस्थिरां) शयानां कुष्ठले (भूतले) दिविष्ठामिवनिर्मलाम् (सीतां)।

आत्तसज्यधनुषाविषुस्पृशावक्षयाशुगनिषङ्गसङ्गिनौ।
रक्षणाय मम राम लक्ष्मणावग्रतः पथि सदैव गच्छताम् ।।

त्वमर्कस्त्वं सोमस्त्वमसि पवनस्त्वं हुतवह-
स्त्वमापरत्त्वं व्योम त्वमुधरणिरात्मा त्वमिति च ।



**ಣತ್ವಾದೇಶ ನಿಯಮ : णत्व ಮತ್ತು षत्व ಗಳ ವಿಧಾನ**

1) ಒಂದೇ ಪದದಲ್ಲಿರುವ ऋ, ॠ, र् ಅಥವಾ ष् ಇವುಗಳ ಮುಂದೆ न् ಕಾರ ಬಂದರೆ ಅಥವಾ ಇವುಗಳ ಮಧ್ಯದಲ್ಲಿ (ಅಂದರೆ न् द ಹಿಂದೆ) ಸ್ವರಗಳು ಮತ್ತು क ಮತ್ತು प ವರ್ಗಗಳ ವ್ಯಂಜನಗಳು, ಅನುನಾಸಿಕಗಳು, ह य् व् र् ಗಳು ಬಂದರೂ न् ಕಾರವು ण ಆಗುತ್ತದೆ. राम+इन्=रामेण, करिणा, नरेण, पूष्णा ಇತ್ಯಾದಿ. नगर+आनि=नगराणि, चतुर्णाम् नृणां, गुरूणां, रामायणम्, प्रमाणम् आभूषणम् ಇತ್ಯಾದಿ. ಆದರೆ न् ಅಂತ್ಯವರ್ಣವಾದರೆ ण् ಆಗುವದಿಲ್ಲ. राम+आन्=रामान्, नरान्, गृहान् ಇತ್ಯಾದಿ. (ಹಾಗೆಯೇ ಮೊದಲನೆಯ ಪದದಲ್ಲಿ ऋ ॠ र् ಅಥವಾ ष ಇವು ಇದ್ದು ಮುಂದಿನ ಪದದಲ್ಲಿ न् ण ಆಗುವದಿಲ್ಲ. रघुनन्दन, सर्वनाम ಆದರೆ निष्पानम्, दुष्पानम् ಮುಂತಾದವುಗಳು ಅಪವಾದವಾಗಿವೆ.)

प्र, पूर्व, पर ಮತ್ತು अपर ಇವುಗಳ ಮುಂದಿನ अह्न ದಲ್ಲಿ न→ण ಆಗುತ್ತದೆ. पूर्वाह्णः, प्राह्णः, अपराह्णः ಇತ್ಯಾದಿ.

**ಷತ್ವಾದೇಶ ನಿಯಮ :**

1) अ आ ಬಿಟ್ಟು ಬೇರೆ ಸ್ವರಗಳ ಮುಂದೆ स् ಆದಿಯಾದ ವಿಭಕ್ತಿ ಪ್ರತ್ಯಯ ಬಂದರೆ स् ಕಾರವು ष् ಆಗುವದು. ಉದಾ-गुरु+सु=गुरुषु, हरिषु, नदीषु, देवेषु, (राजसु-ಇಲ್ಲಿ सु द ಹಿಂದೆ अ ಇದ್ದುದಕ್ಕೆ ष् ಆಗಿರುವದಿಲ್ಲ.)

2) क् ಮತ್ತು र् ದ ಮುಂದಿನ स्→ष् ಆಗುತ್ತದೆ. वाक्+सु=वाक्षु, चतुर्+सु=चतुर्षु।

3) अ आ ಬಿಟ್ಟು ಬೇರೆ ಸ್ವರಗಳು ಮತ್ತು स् ಆದಿಯಲ್ಲಿರುವ ಪ್ರತ್ಯಯ ಇವುಗಳ ನಡುವೆ ಅನುಸ್ವಾರ, ವಿಸರ್ಗ श् ष् स् ಗಳು ಬಂದರೂ ष् ಆಗುತ್ತದೆ. अर्चीम्+सि=अर्चींषि, धनूंषि, आयुषु, गोषु ಇತ್ಯಾದಿ.

4) ಸಮಾಸದ ಪೂರ್ವಪದವು इ ಕಾರಾಂತವಿದ್ದು ಉತ್ತರಪದವು स्था ಧಾತುವಿನ ರೂಪವಿದ್ದರೆ स→ष् ಆಗುತ್ತದೆ. युधि+स्थिरः=युधिष्ठिरः, गविष्ठिरः ।

ವಿ.ಸೂ. : ಇದು ಒಂದೇ ಶಬ್ದದಲ್ಲಿ ಆಗುವ ಸಂಧಿ ಪ್ರಕರಣ (ಸ್ವಾದಿಸಂಧಿ)ದಲ್ಲಿ ಬಂದರೂ ಬಹಳೇ ಮಹತ್ತ್ವದ ನಿಯಮವೆಂದು ಇಲ್ಲಿ ಹೇಳಲಾಗಿದೆ.

इ ಮತ್ತು उ ಅಂತವಿರುವ ಉಪಸರ್ಗಗಳ ಮುಂದಿನ स्था, सिध्, सद्, सु, स्तु ಮುಂತಾದ ಧಾತುರೂಪಗಳ स्→ष्

प्रति+स्था=प्रतिष्ठा, निषेधः, उपनिषत्, अभिषेक, परिषेवन, अभिष्टुत ಇತ್ಯಾದಿ.

ಗಮನಿಸಿರಿ :

विकाशमीयुर्जगतीशमार्गणाः (किरातार्जुनीयं) - ಈ ಪಾದವೇ ಶ್ಲೋಕದ 4 ಪಾದಗಳಾಗಿವೆ. ಸಂಧಿಯ ವೈಶಿಷ್ಟ್ಯದಿಂದ ಅರ್ಥ ಬೇರೆ.

स्यन्दनानो च तुरगाः सुरेभावाविपत्तयः
"                    "                    "

न नोननुन्नो नुन्नो नो नाऽना नानानना ननु।
नुन्नोऽनुन्नो ननुन्नेनो नानेना नुन्न नुन्ननुत्।
ಈ ಏಕಾಕ್ಷರೀ ಶ್ಲೋಕದಲ್ಲಿ ಸಂಧಿವೈಶಿಷ್ಟ್ಯ ಗಮನಾರ್ಹವಾಗಿದೆ.

आदित्य चन्द्रावनिलोऽनलश्च
द्यौर्भूमिरापो हृदयं यमश्च ।
अहश्च रात्रिश्च उभे च सन्ध्ये
धर्मोऽपि जानाति नरस्य वृत्तम् ।।

षत्वಕ್ಕೆ ಉದಾ-

सर्वनारीगुणैः प्रष्ठां (श्रेष्ठां) विष्टरस्थां (दर्भासनस्थां) गविष्ठिराम् (वाचिस्थिरां) शयानां कुष्ठले (भूतले) दिविष्ठामिवनिर्मलाम् (सीतां)।

आत्तसज्यधनुषाविषुस्पृशावक्षयाशुगनिषङ्गसङ्गिनौ।
रक्षणाय मम राम लक्ष्मणावग्रतः पथि सदैव गच्छताम् ।।

त्वमर्कस्त्वं सोमस्त्वमसि पवनस्त्वं हुतवह-
स्त्वमापरत्त्वं व्योम त्वमुधरणिरात्मा त्वमिति च ।



# ಅಧ್ಯಾಯ ೩

# ಪುರುಷ, ವಚನ ಮತ್ತು ಲಿಂಗಗಳು

ವೈಜ್ಞಾನಿಕವಾಗಿ ಸಂಸ್ಕೃತ ಭಾಷೆಯ ವಾಕ್ಯ ರಚನಾ ಪದ್ಧತಿಯು ವೈಶಿಷ್ಟ್ಯಪೂರ್ಣವಾಗಿದೆ. ಒಂದು ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳನ್ನು ಯೋಜಿಸುವಾಗ ನಿರ್ದಿಷ್ಟವಾದ ಪ್ರತ್ಯಯವನ್ನು ಉಪಯೋಗಿಸಿಬಿಟ್ಟರೆ ಅವುಗಳನ್ನು ಹೇಗಾದರೂ ಬಳಸಬಹುದು, ಅರ್ಥದಲ್ಲಿ ಯಾವ ವ್ಯತ್ಯಾಸವೂ ಆಗುವದಿಲ್ಲ. ಉದಾ : मानवः व्याघ्रं हन्ति। (ಮನುಷ್ಯನು ಹುಲಿಯನ್ನು ಕೊಲ್ಲುತ್ತಾನೆ). हन्ति व्याघ्रं मानवः, व्याघ्रं हन्ति मानवः, व्याघ्रं मानवः हन्ति ಹೀಗೆ ಈ ವಾಕ್ಯದಲ್ಲಿಯ ಕರ್ತೃ ಕರ್ಮ ಕ್ರಿಯಾಪದಗಳ ಸ್ಥಾನವನ್ನು ಎಷ್ಟು ತರಹ ಬದಲಾಯಿಸಿದರೂ ಅರ್ಥದಲ್ಲಿ ಯಾವ ವ್ಯತ್ಯಾಸವೂ ಆಗುವದಿಲ್ಲ. ಆದರೆ ಇದನ್ನೇ ಇಂಗ್ಲೀಷಿನಲ್ಲಿ - Man kills tiger ಎಂಬುದನ್ನು ವ್ಯತ್ಯಾಸ ಮಾಡಿದರೆ Tiger kills man ಸಂಪೂರ್ಣವಾಗಿ ವಿರುದ್ಧಾರ್ಥವೇ ಆಗುತ್ತದೆ. ಹೀಗೆ ನಿರ್ದಿಷ್ಟವಾದ ವಿಭಕ್ತಿ ಪ್ರತ್ಯಯಗಳ ಯೋಜನೆಯು ಈ ಭಾಷೆಯ ಒಂದು ವಿಶೇಷ. ಈ ವಿಭಕ್ತಿ ಪ್ರತ್ಯಯಗಳು ಎಲ್ಲ ಶಬ್ದಗಳಿಗೂ ಒಂದೇ ತರಹದ್ದಿದ್ದರೂ ಶಬ್ದಗಳ ಅಂತಗಳು ಭಿನ್ನಭಿನ್ನವಾಗಿದ್ದಾಗ ರೂಪಗಳೂ ಬದಲಾಗುತ್ತವೆ. ಅವುಗಳನ್ನು ಚೆನ್ನಾಗಿ ಗುರುತಿಸಿ ವಾಕ್ಯದಲ್ಲಿ ಸರಿಯಾಗಿ ಉಪಯೋಗಿಸುವುದಕ್ಕೆ ಕೆಲವು ಮಾದರಿ ಶಬ್ದಗಳನ್ನು ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗದಲ್ಲಿ ಹೇಗೆ ನಡೆಸಬೇಕೆಂಬುದನ್ನು ತಿಳಿದುಕೊಳ್ಳುವುದು ಅನಿವಾರ್ಯ.

ಅದೂ ಅಲ್ಲದೆ, ಕರ್ತೃಪದವೂ ಯಾವಾಗಲೂ (ಕರ್ತರಿ ಪ್ರಯೋಗದಲ್ಲಿ) ಪ್ರಥಮಾ ವಿಭಕ್ತಿಯಲ್ಲಿರುತ್ತದೆ. ಕರ್ಮ ಪದ ದ್ವಿತೀಯಾ ವಿಭಕ್ತಿಯಲ್ಲಿರುತ್ತದೆ. ಕರ್ಮಣಿ ಪ್ರಯೋಗದಲ್ಲಿ ಕರ್ತೃಪದವು ತೃತೀಯಾ ವಿಭಕ್ತಿಯಲ್ಲಿರುತ್ತದೆ. ಸಾಧನ ಎಂಬ ಅರ್ಥವಿರುವಾಗ ತೃತೀಯಾ ಬರುತ್ತದೆ. ಸಂಪ್ರದಾನ ಎಂಬಲ್ಲಿ ಚತುರ್ಥಿ, ಅಗಲುವಿಕೆ ಅರ್ಥ, ಭಯಾದಿ ಶಬ್ದಗಳಿರುವಾಗ ಪಂಚಮೀ ವಿಭಕ್ತಿ; 'ಸಂಬಂಧ' ಎಂಬ ಅರ್ಥ ತೋರುವಾಗ ಷಷ್ಠೀ ವಿಭಕ್ತಿ; ಆಧಾರ ಎಂಬಲ್ಲಿ ಸಪ್ತಮಿ, ಸಂಬೋಧಿಸುವಲ್ಲಿ ಸಂಬೋಧನ ಹೀಗೆ ಇನ್ನೂ ಅನೇಕಾನೇಕ ಸಂದರ್ಭಗಳಲ್ಲಿ ನಿಶ್ಚಿತವಾದ ವಿಭಕ್ತಿಗಳನ್ನು ಬಳಸುವ ಪ್ರಕ್ರಿಯೆ ಇದ್ದೇ ಇದೆ. ಈ ಕಾರಣದಿಂದಲೂ ವಿಭಕ್ತಿ ಪ್ರತ್ಯಯಗಳನ್ನು ತಿಳಿದುಕೊಳ್ಳುವದಕ್ಕೆ ಆ ಮಾದರಿ ಶಬ್ದಗಳ ಕಂಠಪಾಠ ಮಾಡಿಬಿಟ್ಟರೆ ನಿಶ್ಚಿಂತೆಯಿಂದ ಅವುಗಳ ಸಂದರ್ಭದಲ್ಲಿ ಅವುಗಳನ್ನು ವಿನಿಯೋಗ ಮಾಡಲು ಸುಲಭವಾಗುತ್ತದೆ. ಎಲ್ಲವನ್ನು ಕಂಠಪಾಠ ಮಾಡದೇ ನೆನಪಿನಲ್ಲಿಟ್ಟುಕೊಂಡು ಬರೆಯುವದು ಬಹಳೇ ಕಠಿಣ. ಮನುಷ್ಯನಲ್ಲಿ ಕಂಠಪಾಠ ಮಾಡಿ ವಿಷಯವನ್ನು ಸಂಗ್ರಹಿಸುವ ಅಪೂರ್ವ ಶಕ್ತಿಯು ಭಗವಂತನ ಅಪೂರ್ವ ಕೊಡುಗೆಯೇ ಆಗಿದೆ. ಅದರ ವಿನಿಯೋಗ ಇಂತಹ ಸಂದರ್ಭದಲ್ಲಿದೆ ಎಂಬುದನ್ನು ವಿದ್ಯಾರ್ಥಿಗಳು ಗಮನಿಸಬೇಕು. ಇದು ವಿದ್ಯಾರ್ಜನೆಯ ಒಂದು ಶ್ರೇಷ್ಠ ಪದ್ಧತಿ. ವಯಸ್ಸಾದ ಮೇಲೆ ಕಂಠಪಾಠ ಮಾಡಿ ಹೆಚ್ಚು ಪ್ರಯೋಜನವಾಗುವದಿಲ್ಲ. ಯಾವದೇ ಭಾಷೆ ಇರಲಿ ಕಂಠಪಾಠ ಮಾಡುವದು ಅದರ ಕಲಿವಿನ ದಾರ್ಢ್ಯವನ್ನು ಹೆಚ್ಚಿಸುತ್ತದೆ.

ಕೆಲವು ಆಧುನಿಕರು ಈ ಪದ್ಧತಿಯು ಪ್ರಶಸ್ತವಲ್ಲವೆಂದು ಹೇಳುವುದುಂಟು. ಆದರೆ ವಿಷಯುವನ್ನು ತಿಳಿದುಕೊಳ್ಳುವ ಸಂದರ್ಭದಲ್ಲಿ ತಿಳಿದುಕೊಳ್ಳುವದು ಸರಿ. ಆದರೆ ಅತ್ಯಾವಶ್ಯಕವಾದದ್ದನ್ನು ಕಂಠಪಾಠ ಮಾಡಿದ್ದಾದರೆ ಅದು ಕಂಪ್ಯೂಟರನಲ್ಲಿ ವಿಷಯಗಳನ್ನು ಕೆಲವೆಡೆಗೆ ಸಂಗ್ರಹಿಸಿ ಇಟ್ಟಂತೆ ನಮ್ಮಲ್ಲಿ ಕೂಡಿಟ್ಟು ಸರಿಯಾದ ಸಂದರ್ಭದಲ್ಲಿ ಅವುಗಳನ್ನು ವಿನಿಯೋಗಿಸುವದು ಬಹಳ ಸುಲಭ. ಹೀಗೆ ಮಾಡದೇ ನಂತರ ಪಶ್ಚಾತ್ತಾಪಪಟ್ಟರೆ ನಿಷ್ಫಲ. ಆಂಗ್ಲಭಾಷೆಯ ಮೇಲಿನ ತಮ್ಮ ಪ್ರಭುತ್ವಕ್ಕೆ ಆಕ್ಸ್‌ಫರ್ಡ್ ಯುನಿವರ್ಸಿಟಿಯಲ್ಲಿ ಪ್ರಶಸ್ತಿ ಪಡೆದ ಭಾರತೀಯರೊಬ್ಬರು ತಮ್ಮಪ್ರಭುತ್ವದ ರಹಸ್ಯವೇನೆಂದು ಕೇಳಿದಾಗ ಸಮಯ ಸಿಕ್ಕಾಗ ಇಂಗ್ಲೀಷ್ ಗದ್ಯಪದ್ಯಗಳನ್ನು ಸಮೃದ್ಧವಗಿ ಕಂಠಪಾಠ ಮಾಡಿದ್ದೇ ರಹಸ್ಯವೆಂದು ಹೇಳಿದ್ದು ಪ್ರಸಿದ್ಧವೇ ಇದೆ. ಆಕಳು ಆಹಾರ ಸಿಕ್ಕಾಗ ಅದನ್ನು ತಿಂದು ಸಂಗ್ರಹಿಸಿ ನಂತರ ಸಮಯ ಸಿಕ್ಕಾಗ ಅದು ಮೆಲುಕು ಹಾಕುವಂತೆ ವಿದ್ಯಾರ್ಥಿಗಳು ಚಿಕ್ಕ ವಯಸ್ಸಿನಲ್ಲಿ ಯಾವುದೇ ಭಾಷೆ ಇರಲಿ ಕಂಠಪಾಠ ಮಾಡಿಕೊಳ್ಳುವ ಹವ್ಯಾಸವನ್ನು ಬೇಸರವಿಲ್ಲದೇ ಇಟ್ಟುಕೊಳ್ಳಬೇಕು.

ಸಂಸ್ಕೃತವನ್ನು ಕಲಿಯುವ ಪಾಠಶಾಲೆಯ ಪ್ರಾಚೀನ ಪರಂಪರೆಯಲ್ಲಿ ಬಾಲ್ಯದಲ್ಲಿ ಶಬ್ದಗಳು, ಸಮಾಸಚಕ್ರ, ಧಾತುರೂಪಾವಲೀ, ಅಮರಕೋಶ ಇವುಗಳ ಅರ್ಥ ತಿಳಿದುಕೊಳ್ಳದೇ ಪಾಠ ಮಾಡಿಸುವ ಪದ್ಧತಿಯು ಸಂಪೂರ್ಣ ಸಂಸ್ಕೃತ ಅಧ್ಯಯನದ ಭದ್ರವಾದ ತಳಹದಿಯಾಗಿದೆ. [ ಇವೆಲ್ಲವುಗಳನ್ನು ಚಿಕ್ಕ ವಯಸ್ಸಿನಲ್ಲಿಯೇ ನನಗೆ ಕಂಠಪಾಠ ಮಾಡಿಸಿದ ನನ್ನ ಗುರುಹಿರಿಯರಿಗೆ ಈಗ ನಾನು ಎಷ್ಟು ಕೃತಜ್ಞತೆ ಸಲ್ಲಿಸಿದರೂ ಕಡಿಮೆ ಎನಿಸುತ್ತದೆ.] ಎಲ್ಲರಿಗೂ ಇವೆಲ್ಲವುಗಳನ್ನು ಅಧ್ಯಯನ ಮಾಡುವಷ್ಟು ಅವಕಾಶ, ಅವಶ್ಯಕತೆ ಇರುವದಿಲ್ಲ. ಆದರೆ ಸಂಸ್ಕೃತವನ್ನು ಯಾವ ಹಂತದಲ್ಲಿ ಕಲಿಯುವದಾದರೂ ಅನಿವಾರ್ಯವಾದ ಕನಿಷ್ಠ ವಿಷಯವನ್ನು ಕಂಠಪಾಠ ಮಾಡಲೇಬೇಕಾಗುವದನ್ನು ಗಮನದಲ್ಲಿಟ್ಟು ಮುಂದೆ ಶಬ್ದರೂಪಾವಲಿಯನ್ನು ಕೊಡಲಾಗಿದೆ. ವಿದ್ಯಾರ್ಥಿಗಳು ದಯವಿಟ್ಟು ಕಂಠಪಾಠ ಮಾಡಬೇಕೆಂದು [ಪಾಲಕರು ಈ ವಿಷಯವನ್ನು ಗಮನದಲ್ಲಿಟ್ಟು ತಮ್ಮ ಮಕ್ಕಳು ಹೆಚ್ಚು ಕಂಠಪಾಠ ಮಾಡುವಂತೆ ಸಹಕರಿಸಬೇಕು. ಮತ್ತು ಸರಿಯಾದ ಉಚ್ಚಾರಕ್ಕೆ ಗಮನ ಕೊಡಬೇಕು.] ನನ್ನ ಆಗ್ರಹಪೂರ್ವಕ ವಿನಂತಿ. ಟೆಂಗಿನ ಗಿಡಕ್ಕೆ ನೀರೆರೆದರೆ ಅದು ಸ್ವಲ್ಪ ತಡವಾದರು ಸಮೃದ್ಧವಾದ ಫಲ ಕೊಡುವಂತೆ ನಾವು ಸೂಚಿಸುವ ಕೆಲವು ಅಂಶಗಳನ್ನು ವಿದ್ಯಾರ್ಥಿಗಳು ಕಂಠಪಾಠ ಮಾಡಿದಲ್ಲಿ ಯಾವ ಕಾಲಕ್ಕೂ ಅದು ವ್ಯರ್ಥವಾಗಲಾರದು.

## ವಚನಗಳು

ಸಂಸ್ಕೃತದಲ್ಲಿ ಮೂರು ವಚನಗಳನ್ನು ಬಳಸುತ್ತಾರೆ. एकवचन, द्विवचन ಮತ್ತು बहुवचन. ಒಂದೇ ವ್ಯಕ್ತಿ ಅಥವಾ ಪದಾರ್ಥ ಇದ್ದರೆ ಅದು ಏಕವಚನ. ಉದಾ : वृक्षः, लता, पुस्तकम्। ಎರಡು ಇದ್ದರೆ ದ್ವಿವಚನ. ಉದಾ : नेत्रे, पादौ, हस्तौ, यमलौ। (ಅವಳಿ ಜವಳಿ). ಮೂರು ಅಥವಾ ಹೆಚ್ಚು ಇದ್ದರೆ ಬಹುವಚನ. ಉದಾ : रामाः, मालाः, कुसुमानि ।

ದ್ವಿವಚನ ಪ್ರಯೋಗವು ಸ್ವಲ್ಪ ಕ್ಲಿಷ್ಟವೆನಿಸಿದರೂ ಈಗಾಗಲೇ ಕಾವ್ಯಗಳಲ್ಲಿ ಬಳಸಲ್ಪಟ್ಟ ಅದನ್ನು ಗುರುತಿಸುವುದಕ್ಕಾದರೂ ನಾವು ಅದನ್ನು ಕಲಿಯಲೇ ಬೇಕು. ಇದಕ್ಕೆ ಸ್ವಲ್ಪ ಕಡಿಮೆ ಮಹತ್ವ ಕೊಡಬಹುದು. ಏಕವಚನ ಮತ್ತು ಬಹುವಚನಗಳು ಹೆಚ್ಚು ವ್ಯಾಪಕವಾಗಿರುತ್ತವೆ.

## ಪುರುಷಗಳು

ಸಂಸ್ಕೃತದಲ್ಲಿ ಪ್ರಥಮ ಪುರುಷ, ಮಧ್ಯಮ ಪುರುಷ ಮತ್ತು ಉತ್ತಮ ಪುರುಷ ಎಂದು ಮೂರು ಪುರುಷಗಳನ್ನು ಉಪಯೋಗಿಸುತ್ತಾರೆ. ಇದನ್ನೇ ಇತರ ಭಾಷೆಗಳಲ್ಲಿಯೂ ಕಾಣಬಹುದು. भवान् = ತಾವು, ಇದು ಇತರ ಭಾಷೆಗಳಲ್ಲಿ ಮಧ್ಯಮ ಪುರುಷ ವಾಗಿರುತ್ತದೆ. ಸಂಸ್ಕೃತದಲ್ಲಿ ಪ್ರಥಮ ಪುರುಷ ವಾಗಿರುತ್ತದೆ. (भवद्योगे प्रथमा।) अस्मत् ಶಬ್ದದ ಅರ್ಥವಿರುವಾಗ ಉತ್ತಮ ಪುರುಷ (अहं, आवां, वयम्) (ನಾನು, ನಾವಿಬ್ಬರು, ನಾವು) . युष्मत् ಶಬ್ದದ ಅರ್ಥವಿರುವಾಗ ಮಧ್ಯಮ ಪುರುಷ त्वं, युवां, यूयं (ನೀನು, ನೀವಿಬ್ಬರು, ನೀವು). ಇವೆರಡಕ್ಕೂ ಭಿನ್ನವಿರುವದೆಲ್ಲವೂ ಪ್ರಥಮ ಪುರುಷ. ಉದಾ : तत्, भवत्, किं, रामः, हरिः ಮುಂ. ಇದನ್ನೇ ಕಂಠಪಾಠ ಮಾಡಲು ಸುಲಭವಾಗಿ ಹೀಗೆ ಹೇಳಲಾಗಿದೆ → युष्मदस्मदन्यच्छब्दवाच्येऽर्थेऽप्रथमपुरुषो भवति। युष्मच्छब्द-वाच्येऽर्थे मध्यमपुरुषो भवति। अस्मच्छब्दवाच्येऽर्थे उत्तमपुरुषो भवति। ಇದಕ್ಕನುಸರಿಸಿಯೇ ಕ್ರಿಯಾಪದಗಳಲ್ಲಿ ಪ್ರತ್ಯಯಗಳು ಬದಲಾಗುತ್ತವೆ. ವಾಕ್ಯದಲ್ಲಿ 'च' ದಿಂದ ಕೂಡಿಕೊಂಡ ಮೂರು ಪುರುಷಗಳ ಪ್ರಯೋಗವಿದ್ದಲ್ಲಿ ಮೊದಲು ಪ್ರಥಮ ಪುರುಷ ನಂತರ ಮಧ್ಯಮ ಪುರುಷ ನಂತರ ಉತ್ತಮ ಪುರುಷ ಇಡಬೇಕು. ಕ್ರಿಯಾಪದದ ಹತ್ತಿರವಿರುವ ಪುರುಷಕ್ಕನುಸರಿಸಿ ಕ್ರಿಯಾಪದವಿಡಬೇಕು. ಉದಾ : कृष्णश्च त्वं च अहं च गच्छामः। त्वं च अहं च गच्छावः। अहं च त्वं च गच्छथः। ಆದರೆ 'वा' ಶಬ್ದದಿಂದ ಕರ್ತೃಗಳು ಭಿನ್ನವಿದ್ದಾಗ ಪುರುಷಗಳನ್ನು ಹಿಂದೆ ಮುಂದೆ ಇಡಬಹುದು. ಆಗ ಕ್ರಿಯಾದ ಹತ್ತಿರವಿರುವ ಪುರುಷದಂತೆ ಕ್ರಿಯಾಪದವಿರಬೇಕು. ಉದಾ : रामश्च त्वं वा गच्छ। त्वं सीता वा गच्छतु। यूयं वयं वा गमिष्यामः।

## ಲಿಂಗಗಳು

ಸಂಸ್ಕೃತದಲ್ಲಿ ಮೂರು ಲಿಂಗಗಳು. ಇವುಗಳನ್ನು ಗುರುತಿಸುವದು ಸ್ವಲ್ಪ ಕಷ್ಟ. ಇದನ್ನು ಸುಲಭ ಮಾಡುವುದಕ್ಕೆ ಅಮರಕೋಶದ ಅತ್ಯಾವಶ್ಯಕ ಶ್ಲೋಕಗಳನ್ನು ತಿಳಿಯಬೇಕು. ಅವುಗಳನ್ನು ಮುಂದೆ ಕೊಡಲಾಗಿದೆ.

ಪುಲ್ಲಿಂಗ - ಸಾಮಾನ್ಯವಾಗಿ ಪುರುಷವಾಚಕ ಶಬ್ದಗಳೆಲ್ಲವೂ ಪುಲ್ಲಿಂಗವಾಗಿರುತ್ತವೆ. ಉದಾ- पुरुषः, नरः, मानवः। ಕೆಳಗಿನ (ಅಮರಕೋಶದ) ೩ ಶ್ಲೋಕಗಳನ್ನು ಕಂಠಪಾಠ ಮಾಡಬೇಕು. ಕೆಳಗಿನ ಶಬ್ದಗಳು, ಅವುಗಳ ಪರ್ಯಾಯಗಳು ಪು. पुंस्त्वे सभेदानुचराः सपर्यायाः सुरासुराः। ಸಾಮಾನ್ಯವಾಗಿ ಸುರ, ಅಸುರ ಮತ್ತು ಅವರ ಅನುಚರ.

स्वर्ग-यागाद्रि-मेघाब्धि-द्रुकालासि-शरारयः । ಸ್ವರ್ಗ, ಯಾಗ, ಅದ್ರಿ, ಮೇಘ, ಸಮುದ್ರ, ವೃಕ್ಷ, ಕಾಲ, ಖಡ್ಗ, ಬಾಣ, ವೈರಿಗಳು ಮತ್ತು ಇವುಗಳ ಪರ್ಯಾಯ ಪದಗಳು.ಪು.

करगण्डौष्ठदोर्दन्तकण्ठकेशनखस्तनाः । ಕರ, ಕಪೋಲ, ತುಟಿ, ಬಾಹು, ದಂತ, ಕಂಠ, ಕೇಶ, ನಖ, ಸ್ತನ ಮತ್ತು ಇವುಗಳ ಪರ್ಯಾಯಗಳು.ಪು.

कशेरुजतुवस्तूनि हित्वा तुरुविरामकाः । कशेरु, जतु, वस्तु, अश्रु, दारु ಇವುಗಳನ್ನು ಬಿಟ್ಟು 'तु' ಮತ್ತು 'रु' ಅಂತವಿರುವ ಶಬ್ದಗಳು ಪುಲ್ಲಿಂಗವಿರುತ್ತವೆ. क्रतुः, जन्तु, हेतुः, गुरुः, मेरुः ವಗೈರೆ.

कषणभमरोपान्ताः यद्यदन्ता अमी अथ
पथनयसटोपान्ता गोत्राख्याश्चरणाह्वयाः ।

ಯಾವ ಅಕಾರಾಂತ ಶಬ್ದಗಳ ಉಪಾಂತ್ಯವು (उपधाय) क ष ण भ म र ಇರುತ್ತದೆಯೋ ಮತ್ತು ಯಾವ ಶಬ್ದದ ಉಪಾಂತ್ಯಗಳು प थ न य स ट ಇವೆಯೋ ಅವು ಪು. ಉದಾ - बालकः, स्तबकः, वृषः, गणः, गुणः, स्तम्भः, कुम्भः, दर्भः, भीमः, सोमः, होमः, यूपः, कपिः, रथः, फेनः, समयः, रसः, परः ವಗೈರೆ ಮತ್ತು ಗೋತ್ರವಾಚಕ ಶಬ್ದಗಳು (भरद्वाजः अत्रिः) वेदशाखावाचक (कठः, केनः) . ಇನ್ನೂ ಅನೇಕ ಪ್ರತ್ಯಯಾಂತಗಳು ಪುಲ್ಲಿಂಗದಲ್ಲಿರುತ್ತವೆ. ಅವುಗಳನ್ನು ರೂಢಿಯಿಂದ ತಿಳಿದುಕೊಳ್ಳಬಹುದು.

ಸ್ತ್ರೀಲಿಂಗ - स्त्रियामीदूद्विरामे काच् सयोनि प्राणिनाम च

1) ದೀರ್ಘ 'ई'ಕಾರಾಂತ, 'ऊ'ಕಾರಾಂತ ಒಂದೇ ಸ್ವರವಿರುವ ಶಬ್ದ, ಸ್ತ್ರೀವಾಚಕ ಪ್ರಾಣಿಗಳ ಶಬ್ದ. ಉದಾ - श्रीः, भीः, ह्रीः, भ्रूः, भूः, नारी, पत्नी, दुहिता, व्याघ्री, चटका, कलत्रं (न) ಮತ್ತು दाराः (पु).

2) नामविद्युन्निशावल्ली वीणादिग्भू नदी ह्रियाम्।
अदन्तैर्द्विगुरेकार्थो न च पात्र युगादिभिः।

विद्युत्, निशा (ರಾತ್ರಿ),वल्ली (ಬಳ್ಳಿ), वीणा, दिक्, भूः, नदी, ह्रीः (ಲತೆ) ಇವುಗಳ ಶಬ್ದಗಳು ಸ್ತ್ರೀಲಿಂಗ.

ಸಮಾಹಾರ ದ್ವಿಗು ಇರುವ ಅಕಾರಾಂತ ಶಬ್ದಗಳು ಸ್ತ್ರೀಲಿಂಗ (ವಾಗುತ್ತವೆ). ಉದಾ- त्रिलोकी, पञ्चवटी, चतुष्पदी, सप्तशती-ಆದರೆ पात्र, युग ಮುಂತಾದವುಗಳು ಅಪವಾದ- पञ्चपात्रम्, चतुर्युगम्, त्रिभुवनम् ಇತ್ಯಾದಿ.

3) ಭಾವಾರ್ಥದಲ್ಲಿ 'ता' ಪ್ರತ್ಯಯಾಂತ ಶಬ್ದಗಳು ಸ್ತ್ರೀ. जनता, बन्धुता, दरिद्रता क्ति (ति) ಪ್ರತ್ಯಯಾಂತ ಮತ್ತು अनि ಪ್ರತ್ಯಯಾಂತ ಶಬ್ದಗಳು ಸ್ತ್ರೀ. ಉದಾ - गतिः, मतिः, कृतिः, अवनिः, अशनिः (ಸ್ತ್ರೀ.ಪು. ಉಭಯ ಲಿಂಗ).

4) ಭಾವವಾಚ್ಯ आ ಮತ್ತು अन् ಪ್ರತ್ಯಯವಿರುವ ಶಬ್ದಗಳು. ಉದಾ-सेवा, पूजा, चिन्ता, शोभा, जिज्ञासा, अर्चना, कल्पना, गणना, वासना ವಗೈರೆ. ऊनविंशतिः ಯಿಂದ नवनवतिः ಯವರೆಗೆ ಎಲ್ಲ ಸಂಖ್ಯಾವಾಯಕಗಳು ಸ್ತ್ರೀ. विंशतिः, सप्ततिः, अशीतिः

5) ತಿಥಿವಾಚಕಗಳು ಸ್ತ್ರೀ. प्रतिपद्, द्वितीया ವಗೈರೆ.

**ನಪುಂಸಕಲಿಂಗ**

1) द्विहीनेऽन्यच्चखारण्य-पर्णश्वभ्र-हिमोदकम्।
शीतोष्ण-मांस-रुधिर-मुखाक्षि-द्रविणं बलम्॥

ಪು. ಸ್ತ್ರೀ. ಇಲ್ಲದಂಥವುಗಳು ಮತ್ತು ख (ಆಕಾಶ), अरण्य, पर्ण (ಎಲೆ), श्वभ्र (ತೆಗ್ಗು), हिम उदक शीत उष्ण मांस रुधिर मुख अक्षि द्रविण ಮತ್ತು बलम् ಇವು ನಪುಂ.

2) फलहेम-शुल्ब-लोह-सुख-दुःख-शुभाशुभम्।
जल-पुष्पाणि-लवण-व्यञ्जनान्यनुलेपनम्॥
भयामृतशकृद्द्रवस्त्र-गृहाभरणलाञ्छनम्। फल, हेम (ಬಂಗಾರ), शुल्ब (ತಾಮ್ರ), लोह (ಕಬ್ಬಿಣ), सुख, दुःख, शुभ, अशुभ, जल, पुष्प, लवण, व्यञ्जन अनुलेपनं ಇವುಗಳ ಪರ್ಯಾಯಗಳು ನ. भय, अमृत, शकृत् (ಶಗಣಿ), वस्त्र, गृहं, आभरण, लाञ्छन (ಚಿನ್ಹ).ಇವು ನಪುಂ.

3) ಸಾಮಾನ್ಯವಾಗಿ ವಿಸರ್ಗವಿರುವ (ಅಕಾರಾಂತ) ಶಬ್ದಗಳು ಪುಲ್ಲಿಂಗವಿರುತ್ತವೆ. ಆದರೆ ಎರಡು ಸ್ವರಗಳಿರುವ अस् इस् उस् ಅಂತದಲ್ಲಿರುವವು ನ. (ಕೆಳಗಿನ ಎರಡು ಶ್ಲೋಕಗಳನ್ನು ಕಂಠಪಾಠ ಮಾಡಬೇಕು. सकारान्त ಮತ್ತು जकारान्त ಶಬ್ದಗಳಿವೆ).

मनो वासो वचो वक्षः स्रोतस्तेजो यशो नभः।
छन्दश्चक्षुस्तपश्चायुः सर्पिश्चेतो रजः सरः॥

ओको वर्चो धनुर्जोतिरंहश्चार्चिर्महोरहः।
रोचिःशोचिस्तमःश्रेयो रोधो रेतस्ततः शिरः॥

हविर्यजुस्तथोरश्च रक्षश्चाम्भः पयस्तथा।
अयश्चोजश्च्छदिः शब्दा विसर्गान्ता नपुंसके ॥

4) ಸಮಾಹಾರದ್ವಂದ್ವ ಮತ್ತು ಅವ್ಯಯೀಭಾವ ಸಮಾಸದಲ್ಲಿ ನಪುಂಸಕಲಿಂಗವಾಗುತ್ತವೆ. ಉದಾ- अहिनकुलम्, पाणिपादम्, उपनगरम्, यथाविधि, यथाक्रमम्।

5) ಕ್ರಿಯಾವಿಶೇಷಣ ಮತ್ತು ಅವ್ಯಯದ ವಿಶೇಷಣಗಳು ನ.ಲಿ. ಉದಾ- मन्दं, याति, रमणीयं, प्रति (ಅವ್ಯಯ)

6) द्विहीनं प्रसवे सर्वं गद्यपद्ये कृतौ कवेः। प्रसव ಅಂದರೆ फल ಮತ್ತು पुष्प ಎಂಬ ಅರ್ಥದಲ್ಲಿ ನಪುಂ. वृक्ष ಎಂಬ ಅರ್ಥದಲ್ಲಿ ಪು.ಲಿ. ಉದಾ- आम्रः (ಗಿಡ), आम्रम् (ಹಣ್ಣು), पनसः, पनसम् (ಹಲಸು), कपित्थः, कपित्थम् (ಬೆಳವಲ).

7) ಭಾವಾರ್ಥಕದಲ್ಲಿ क्त, अनट्, तव्य, अनीय ಪ್ರತ್ಯಯ ಮುಂತಾದವುಗಳಿದ್ದಲ್ಲಿ ನ.ಲಿ. ಉದಾ- स्नातम्, चरितम्, असितम्, गमनं, पानं, दातव्यं, दानीयम्।

8) 'त्र' ಅಂತ್ಯದಲ್ಲಿರುವ ಶಬ್ದ चरित्रं, गात्रं, पात्रं, मन्त्रं, कलत्रं (पुत्रः,मन्त्रः ಅಪ.).

9) कारणं करणं मूलं प्रमाणं शरणं पदम्। आस्पदं लक्षणं स्थानमन्तरं ॥

ಇವು ವಿಶೇಷಣ, ಯಾವ ಲಿಂಗದಲ್ಲಿದ್ದರೂ ನಪುಂಸಕಲಿಂಗದಲ್ಲಿಯೇ ಉಳಿಯುತ್ತವೆ. विष्णुर्विश्वस्य कारणम्। बुद्धिस्तु करणं स्मृतम्। क्रोधो मूलमनर्थानाम्। वेदाः प्रमाणं (नित्य एकवचन) श्रीहरिः शरणम्। अविवेकः परमापदां पदम्। प्रमोदास्पदं विषयः (नित्य एकवचन) विवेको लक्षणं सताम्। गुणाः पूजास्थानं राजान्तरम् ಇತ್ಯಾದಿ.

ಉಭಯಪುಲ್ಲಿಂಗ :- ನಪುಂಸಕಲಿಂಗ ಮತ್ತು ಪುಲ್ಲಿಂಗ

1) पातकोद्योग-चरक-तमालामलकानडः। पातक उद्योग चरक (ವೈದ್ಯಶಾಸ್ತ್ರ), तमाल (ದಾಲ್ಚಿನ್ನಿ), आमलक (ನೆಲ್ಲೀಕಾಯಿ), नड (कुष्ठ मुण्ड शीधु) (ಮದ್ಯ), पुस्त (ಪುಸ್ತಕ ) ಮುಂತಾದವುಗಳು.

ಪುಲ್ಲಿಂಗ, ಸ್ತ್ರೀಲಿಂಗ

2) षष्ट्यन्तः प्राक्पदासेना-छाया-शाला-सुरा-निशा। ಷಷ್ಠೀ ಸಮೂಹದಲ್ಲಿ ಸೇನಾದಿ ಶಬ್ದಗಳು ಅಂತ್ಯದಲ್ಲಿರುವ ಶಬ್ದಗಳು - नृसेनः-नृसेना, वृक्षच्छायः-छाया, गोशालः-गोशाला, युवसुरः-युवसुरा, श्वनिशः-श्वनिशा ವಗೈರೆ.

3) ಮೂರೂ ಲಿಂಗಗಳಲ್ಲಿ

त्रिषु पात्री पुटी वाटी पेटीकुवलदाडिमौ। ಇವು ಮೂರೂ ಲಿಂಗಗಳಲ್ಲಿರುತ್ತವೆ

7) ಕ್ರಿಯೆ ನಡೆಯುವ ಉದ್ದೇಶವನ್ನು ಸೂಚಿಸುವ ಪದಕ್ಕೆ ಚ.ವಿ. विद्यायै श्रमं करोति।

8) हित-ಶಬ್ದವನ್ನು ಬಳಸಿ ಯಾರಿಗೆ ಹಿತ ಉಂಟಾಗಬೇಕಾಗಿದೆಯೋ ಅವರನ್ನು ಸೂಚಿಸುವ ಪದಕ್ಕೆ ಚ.ವಿ. ಬರುತ್ತದೆ. (हितयोगे→वार्तिक) जगते हितं करोति।

9) तुमन्ताव्ययವು ಗುಪ್ತವಾಗಿರುವಾಗ ಅದರ ಕರ್ಮವನ್ನು ಸೂಚಿಸುವ ಪದಕ್ಕೆ ಚ.ವಿ. ಬರುತ್ತದೆ. छात्रः फलेभ्यः वनं याति। ಅಂದರೆ फलानि आहर्तुं-ಹಣ್ಣು ತರಲು ಅಡವಿಗೆ ಹೋಗುತ್ತಾನೆ ಎಂದರ್ಥ. ಇಲ್ಲಿ आहर्तुं ಎಂಬ ತುಮಂತಾವ್ಯಯ ಗುಪ್ತವಿದೆ. (तुमन्ताव्यय ದ ಬಗ್ಗೆ ಕೃದಂತಗಳ ಅಧ್ಯಾಯ ನೋಡಿರಿ)

10) तुमन्ताव्यय ದ ಅರ್ಥವಿರುವ ಪದಕ್ಕೆ ಚ.ವಿ. ಬರುತ್ತದೆ. सः भोजनाय याति ಎಂಬಲ್ಲಿ भोक्तुं अथवा भोजनं कर्तुं याति ಎಂದರ್ಥ.

11) नमः-स्वस्ति-स्वाहा-अलं-वषट्-ಇವುಗಳನ್ನು ಉಪಯೋಗಿಸಿದಲ್ಲಿ 'ಇವರಿಗೆ' ಎಂದು ಹೇಳಬೇಕಾದ ಪದಕ್ಕೆ ಚ.ವಿ. ಬರುತ್ತದೆ. मित्राय नमः। तुभ्यं स्वस्ति। इन्द्राय स्वाहा। पितृभ्यः स्वधा। कौरवेभ्यः भीमः अलम्। (ಸೋಲಿಸಲು ಸಮರ್ಥ) [अलम् ಎಂಬುದನ್ನು ಸಾಕು ಎಂಬ ಅರ್ಥದಲ್ಲಿದ್ದರೆ ತೃತೀಯಾ ಬರುತ್ತದೆ. अलं कौरवेभ्यः ಇಲ್ಲಿ 'ಜಯಿಸಲು ಸಮರ್ಥ' ಎಂಬ ಅರ್ಥದಲ್ಲಿ ಚ.ವಿ. ಬಂದಿದೆ.] नेत्रत्रयायै वषट्। (नमः-ಇಷ್ಟೇ ಇದ್ದರೆ ಚ.ವಿ. नमस्करोति ಎಂದು ಹೇಳಿದಲ್ಲಿ ದ್ವಿತೀಯಾ-देवं नमस्करोति।)

रामाय रामभद्राय रामचन्द्राय वेधसे।
रघुनाथाय नाथाय सीतायाः पतये नमः ।।

12) ಶಾರೀರಿಕ ಗಮನ ಹೇಳುವ ಕ್ರಿಯಾಪದ ಉಪಯೋಗಿಸಿದಲ್ಲಿ ತಲುಪುವ ತಾಣವನ್ನು ಹೇಳುವ ಪದಕ್ಕೆ ಚ.ವಿ. ಬರುತ್ತದೆ. सः नगराय (नगरं वा) गच्छति।

13) कथ्-शंस्-ख्या ಮುಂ. ಧಾತುಗಳನ್ನು ಹೇಳು ಎಂಬ ಅರ್ಥದಲ್ಲಿ ಬಳಸಿದಾಗ ಯಾರನ್ನು ಕುರಿತು ಹೇಳಲಾಗುತ್ತದೆಯೋ ಅಲ್ಲಿ ಚ.ವಿ. माता बालाय कथयति, शंसति, ख्याति वा।

ಗಮನಿಸಿರಿ :

चतुर्थी

विद्या विवादाय धनं मदाय शक्तिः परेषां परिपीडनाय
खलस्य साधोर्विपरीतमेतत् ज्ञानाय दानाय च रक्षणाय।
न देवाय न बन्धुभ्यो न धर्माय न चार्थिने।
नात्मने दुर्जन-द्रव्यं भुज्यते राजतस्करैः।।
दानाय लक्ष्मीः सुकृताय विद्या चिन्ता च लोकाय सदा हिताय।
परोपकाराय वचांसि यस्य तस्मै नमःपूरुषसत्तमाय।।

5) अपादानकारकम्-ಪಂಚಮೀ ವಿಭಕ್ತಿ

1) ಒಂದು ವಸ್ತು ಯಾವುದರ ದೆಸೆಯಿಂದ ಅಗಲುತ್ತದೆಯೋ ಆ ಅವಧಿಭೂತ ವಸ್ತು ಅಥವಾ ಮೂಲಸ್ಥಾನ (ಚಲ ಅಥವಾ ಅಚಲ) ಸೂಚಿಸುವ ಶಬ್ದಕ್ಕೆ अपादान ಸಂಜ್ಞೆ ಬಂದು ಅಲ್ಲಿ ಪಂಚಮೀ ವಿಭಕ್ತಿ ಬರುತ್ತದೆ. (ध्रुवमपायेऽपादानम्) 'अपादाने पञ्चमी'-वृक्षात् फलं पतति ಇಲ್ಲಿ ವೃಕ್ಷದ ದೆಸೆಯಿಂದ ಹಣ್ಣು ಬೀಳುತ್ತದೆ. धावतो अश्वात् पतति ಎಂಬಲ್ಲಿಯೂ (ಓಡುತ್ತಿರುವ ಕುದುರೆಯ ದೆಸೆಯಿಂದ ಬೀಳುತ್ತಾನೆ) अश्वात् ಎಂಬುದಕ್ಕೆ ಅಗಲುವಿಕೆಯ ಅವಧಿ ಆಗಿರುವದರಿಂದ ಪಂಚಮಿ ವಿಭಕ್ತಿ ಬಂದಿದೆ.

2) ಅಂಜು ಮತ್ತು ಕಾಪಾಡು ಎಂಬ ಅರ್ಥವಿರುವ ಶಬ್ದಗಳ ಬಳಕೆಯಲ್ಲಿ ಹೆದರಿಕೆಗೆ ಕಾರಣವಾದದ್ದನ್ನು ಸೂಚಿಸುವ ಪದಕ್ಕೆ ಪಂ.ವಿ. ಬರುತ್ತದೆ. (भीत्रार्थानां भयहेतुः-1-4-5) चोरात् बिभेति। सिंहात् मृगं त्रायते-ಎಂಬಲ್ಲಿ ಸಿಂಹವು ಹೆದರಿಕೆಗೆ ಕಾರಣ. ಅದರ ದೆಸೆಯಿಂದ ರಕ್ಷಣೆ. त्रातं-त्राणं-रक्षितमवितं-गोपायितं च गुप्तं च ॥ - अमरः ಇವು ರಕ್ಷಣೆಯ ಪರ್ಯಾಯ ಪದಗಳು. ಇವು ಪಂ.ವಿ. ತೆಗೆದುಕೊಳ್ಳುತ್ತವೆ.

ಗಮನಿಸಿ -

तैलात् रक्षेत् जलाद्रक्षेत् रक्षेत् शिथिलबन्धनात्।
मूर्खहस्ताच्च संरक्षेत् एवं पदति पुस्तकम्॥

3) जुगुप्सा, विराम ಮತ್ತು प्रसाद ಇವು ಮತ್ತು ಇವುಗಳ ಅರ್ಥವಿರುವ ಶಬ್ದಗಳನ್ನು ಬಳಸಿದಾಗ ಯಾವುದರ ದೆಸೆಯಿಂದ ಜುಗುಪ್ಸಾದಿಗಳಿವೆಯೋ ಅಲ್ಲಿ ಪಂ.ವಿ. पापात् जुगुप्सते, विरमते वा। धर्मात् प्रमाद्यते। (ತಪ್ಪು ಮಾಡು)

4) 'ನಿವಾರಿಸು' ಎಂಬ ಅರ್ಥದ ಶಬ್ದಗಳನ್ನು ಉಪಯೋಗಿಸಿದಾಗ ಯಾವುದರ ದೆಸೆಯಿಂದ ನಿವಾರಿಸುವನೋ ಅಲ್ಲಿ ಪಂ.ವಿ. पापात् निवारयति, माषेभ्यः अश्वं वारयति।

5) 'ಅಡಗಿಕೊಳ್ಳು' ಈ ಅರ್ಥದ ಶಬ್ದಗಳಿದ್ದಲ್ಲಿ ಯಾರ ದೆಸೆಯಿಂದ ಅಡಗಿಕೊಳ್ಳುತ್ತಾನೋ ಆ ಪದಕ್ಕೆ ಪಂ.ವಿ. ಬರುತ್ತದೆ. चोरः सैनिकात् निलीयते। शशकः सिंहात् निगूहति।

6) ಗುರುವಿನಿಂದ ವಿಧಿಪೂರ್ವಕ ವಿದ್ಯಾರ್ಜನೆ ಮಾಡುವದನ್ನು ಸೂಚಿಸುವಾಗ ಗುರುವಾಚಕ ಪದಕ್ಕೆ ಪಂ.ವಿ. कहोलः गर्गात् अधीते।

7) जन् ಧಾತು ಇದ್ದಲ್ಲಿ ಜನ್ಮದ ಮೂಲ ಕಾರಣ ಸೂಚಿಸುವ ಪದಕ್ಕೆ ಪಂ.ವಿ. देहात् केशाः जायन्ते।

8) ಜನ್ಮದ ಮೂಲ ಕಾರಣ ಮತ್ತು ಪ್ರಕಟವಾಗುವ ಸ್ಥಾನಕ್ಕೆ ಪಂ.ವಿ. हिमवतो गङ्गा प्रभवति।

9) ಲ್ಯಬಂತಾವ್ಯಯಗಳು ಲುಪ್ತವಾದಾಗ ಅವುಗಳ ಕರ್ಮ ಅಥವಾ ಅಧಿಕರಣ ಹೇಳುವ ಪದಗಳಿಗೆ ಪಂ.ವಿ. राजा प्रासादात् पश्यति ಎಂಬಲ್ಲಿ प्रासादमारुह्य पश्यति ಎಂದರ್ಥ. ಇಲ್ಲಿ आरुह्य ಎಂಬುದು ಗುಪ್ತ. ಅದಕ್ಕೆ ಕರ್ಮ प्रासाद ಅಲ್ಲಿ ಪಂ.ವಿ. वृद्धः आसनात् पश्यति-आसने उपविश्य ಎಂದರ್ಥ. धवात् नववधूः जिह्नेति। धवं वीक्ष्य-ಪತಿಯನ್ನು ನೋಡಿ ನಾಚುತ್ತಾಳೆ ಎಂದರ್ಥ.

10) प्रभृत्यारम्योर्ध्वपरं-दूरान्तिक-विनाऽऽ(आ)बहिः।
पूर्वोत्तरादिदिक्शब्दा अन्यारादितरं ऋते।
हेतुबोधक शब्दे च अपादानमनन्तरम्।। ಇವು ಬಂದಲ್ಲಿ ಪಂ.ವಿ.

अन्य, आरात् (ಅವ್ಯಯ ದೂರ ಅಥವಾ ಸಮೀಪ) इतर ऋते (ಹೊರತಾಗಿ) ಇವುಗಳಲ್ಲಿ ಸಂಬಂಧಪಟ್ಟ ಶಬ್ದಕ್ಕೆ ಪಂ.ವಿ. बालात् अन्यः, इतरः वा। गृहात् आरात्। धनात् ऋते।

11) ದಿಕ್ಕುಗಳನ್ನು ಸೂಚಿಸುವ पूर्व, उत्तर, दक्षिण ಮುಂ. ಮತ್ತು ಕಾಲವನ್ನು ಸೂಚಿಸುವ पूर्व, प्राक्, अपर ಮುಂ. ಶಬ್ದಗಳು ಬಂದಾಗ ಅವುಗಳಿಗೆ ಸಂಬಂಧಿಸಿದ ಪದಗಳಿಗೆ ಪಂ.ವಿ. ಬರುತ್ತದೆ. ग्रामात् उत्तरा नदी। चैत्रात् प्राक् फाल्गुनः। ಅವಯವ ವಾಚಕವಿದ್ದಲ್ಲಿ ಪಂ.ವಿ. ಬರುವದಿಲ್ಲ. पूर्वं कायस्य ಇಲ್ಲಿ ಷಷ್ಠೀ ಬಂದಿದೆ.

12) प्रभृति, आरभ्य, बहिः, ऊर्ध्वं परम्, अनन्तरं ಮತ್ತು आ ಇವು ಬಂದಲ್ಲಿ ಪಂ.ವಿ. ಬರುತ್ತದೆ. बाल्यात् प्रभृति। जन्मनः आरभ्य, ग्रामात् बहिः, विवाहात् अनन्तरं, ऊर्ध्वं परम्, आ समुद्रात्।

13) प्रति-ಅವ್ಯಯವು 'ಬದಲಾಗಿ' ಎಂಬ ಅರ್ಥದಲ್ಲಿದ್ದರೆ ಯಾವುದರ ಬದಲು ಎಂದಿದೆಯೋ ಅದಕ್ಕೆ ಪಂ.ವಿ. तिलेभ्यः प्रति व्रीहीन् जुहोति।

14) विना-ಅವ್ಯಯವು ಪಂಚಮೀ, (ದ್ವಿ.ವಿ. ಅಥವಾ ತೃ.ವಿ.) ತೆಗೆದುಕೊಳ್ಳುತ್ತದೆ. श्रमात् श्रमं श्रमेण वा विना सुखं न।

15) दुर, अन्तिक ಇವು ಪಂ.ವಿ. (ದ್ವಿ.ವಿ. ಅಥವಾ ತೃ.ವಿ.) ತೆಗೆದುಕೊಳ್ಳುತ್ತವೆ. ग्रामस्य दूरं दूरात्-दूरेण वा। अन्तिकं अन्तिकात् अन्तिकेन वा।

16) 'ಹೇತು'-ಈ ಕಾರಣದ ದೆಸೆಯಿಂದ ಎಂಬರ್ಥವಿದ್ದಲ್ಲಿ (ಅನುಮಾನ ಪ್ರಮಾಣದಲ್ಲಿ) ಪಂ.ವಿ. ಬರುತ್ತದೆ. पर्वतो वह्निनात् धूमात् ಎಂಬಲ್ಲಿ ಪರ್ವತದಲ್ಲಿ ಅಗ್ನಿ ಇದೆ. ಏಕೆಂದರೆ ಧೂಮವಿದೆ. ಇದೇ ಹೇತು.

ಗಮನಿಸಿರಿ : **पञ्चमी**

दूरादावसथात् मूत्रं दूरात् पादावसेचनम्।
दूराच्च भाव्यं दुस्युभ्यो दूराच्च कुपितात् गुरोः॥

महेशान्नापरो देवो महिम्नो ना परा स्तुतिः
अघोरान्नापरो मन्त्रो नास्ति तत्त्वं गुरोः परम्॥

पादपानां भयं वातात् वस्त्रणामातपात् भयम्
पर्वतानां भयं वज्रात् साधूनां दुर्जनाद् भयम्॥

लोभान्मोहाद् भयान्मैत्र्यात् कामात् क्रोधाच्च मत्सरात्।
अज्ञानात् बालभावाच्च साक्ष्यं वितथमुच्यते॥

### 6) षष्ठी (कारकम्)-ಷಷ್ಠೀ ವಿಭಕ್ತಿ

1) ಸ್ವಾಮಿ-ಸೇವಕ, ಜನ್ಯ-ಜನಕ, ಕಾರ್ಯ-ಕಾರಣ, ಅಂಗ-ಅಂಗೀ, ಗುಣ-ಗುಣಿ, ಗುರು-ಶಿಷ್ಯ ಮುಂ. ಎರಡು ವಸ್ತುಗಳಲ್ಲಿಯ ಸಂಬಂಧವನ್ನು ಸೂಚಿಸುವಾಗ ಷಷ್ಠೀ ವಿಭಕ್ತಿ ಉಪಯೋಗಿಸಬೇಕು. (षष्ठी शेषे-2-3-10) नृपस्य सेवकः। रामस्य माता। तव हस्तः। योधस्य शौर्यम्। कश्यपस्य शिष्यः।

2) हेतु-ಪದವು ಷಷ್ಠಿ ವಿಭಕ್ತಿ ತೆಗೆದುಕೊಳ್ಳುತ್ತದೆ. अल्पस्य हेतोः। विस्मृतं कस्य हेतोः। ಸರ್ವನಾಮವಿದ್ದಲ್ಲಿ ತೃತೀಯಾ ವಿಭಕ್ತಿಯನ್ನೂ ಬಳಸಬಹುದು-केन हेतुना (षष्ठी हेतु प्रयोगे-2-3-26)

3) (पुरोऽधोऽग्रेऽग्रतो मध्ये पुरस्तात् पुरतोपरि।) दिक्वाचक ಪದಗಳಿಗೆ अतस्-ಪ್ರತ್ಯಯ ಹಚ್ಚಿ ಬಳಸಿದಾಗ ಸಂಬಂಧಪಟ್ಟ ಪದಕ್ಕೆ ಷ.ವಿ. ಬರುತ್ತದೆ. गृहस्य दक्षिणतः पुरः, पुरस्तात् उपरि उपरिष्टात्। ಆದರೆ एनप्-ಪ್ರತ್ಯಯ ಹಚ್ಚಿದಾಗ ಷಷ್ಠೀ ಅಥವಾ ದ್ವಿ.ವಿ. ಬರುತ್ತದೆ. दक्षिणेन वृक्षवाटिकां, वृक्षवाटिकायाः वा।

4) दूर अन्तिक-ಇವುಗಳಿಗೆ ಸಂಬಂಧಿಸಿದ ಪದಗಳಿಗೆ ಷಷ್ಠೀ (ಅಥವಾ ಪಂಚಮಿ) ವಿ ಬರುತ್ತದೆ. ग्रामस्य (ग्रामात् वा) दूरम्, अन्तिकम्।

5) ಸ್ಮರಿಸು, ಹಂಚುವಿಕೆ (ದಯೆತೋರು), ಒಡೆತನ (अधीगर्थदयेशां कर्मणि) ಈ ಅರ್ಥವಿರುವ ಧಾತುಗಳನ್ನು ಬಳಸಿದಲ್ಲಿ ಸಾಮಾನ್ಯ ಷಷ್ಠೀ ಹೇಳುವಾಗ ಇವುಗಳ ಕರ್ಮವಾಚಕ ಪದಗಳಿಗೆ ಷ.ವಿ. ಬರುತ್ತದೆ. मातुः स्मरति। धनस्य दयनं (ಹಂಚುವಿಕೆ) ईशनं वा (ಒಡೆತನ) भिक्षुकस्य दयनं (ಭಿಕ್ಷುಕನ ಮೇಲೆ ದಯೆ ತೋರುವದು).

6) ಹಿಂಸೆಯ ಅರ್ಥ ಹೇಳುವ जास्, नि+हन्, प्र+हन्, नट्, क्रथ ಮತ್ತು पिष् ಧಾತುಗಳನ್ನು ಬಳಸಿದಲ್ಲಿ ಸಂಬಂಧ ಸಾಮಾನ್ಯ (शेषषष्ठी) ಹೇಳಿದಾಗ ಕರ್ಮವಾಚಕಕ್ಕೆ ಷ.ವಿ. ಬರುತ್ತದೆ. चोरस्य उज्जासनं,शत्रूणां निहननं, प्रहरणम् वा। चोरस्य उन्नाटनम्, क्राथनं। (ಹಿಂಸಿಸುವದು) दुर्बलस्य पेषणम्। (ಕುಟ್ಟುವದು)

7) ಕೃದಂತದ ಮೂಲಕ ಕ್ರಿಯೆಯನ್ನು ಸೂಚಿಸುವಾಗ ಕರ್ತೃವಿನ ಅರ್ಥದಲ್ಲಿಯೂ ಕರ್ಮದ ಅರ್ಥದಲ್ಲಿಯೂ ಷಷ್ಠೀ ವಿಭಕ್ತಿ ಬರುತ್ತದೆ. कृष्णस्य कृतिः (कृष्णकर्तृककृतिः), भारतस्य वाचनम् (भारतकर्मक वाचनम्), जगतः कर्ता कृष्णः।

8) ಕರ್ಮಣಿ ವಿಧ್ಯರ್ಥ ಕೃದಂತವನ್ನು ಬಳಸಿದಾಗ ಅದರ ಕರ್ತೃವಿಗೆ ಷಷ್ಠೀ (ಅಥವಾ ತೃ.ವಿ.) ಬರುತ್ತದೆ. ಅಲ್ಲದೆ ಹೋಲಿಕೆಯನ್ನು ಸೂಚಿಸುವ सदृश, सम ಮುಂತಾದವುಗಳನ್ನು ಬಳಸಿದಲ್ಲಿ ಯಾವುದಕ್ಕೆ ಹೋಲಿಸಬೇಕಾಗಿದೆಯೋ ಆ ಶಬ್ದಕ್ಕೆ ಷಷ್ಠೀ (ಅಥವಾ ತೃ.ವಿ.). (मम मया) पितरौ सेव्यौ। चन्द्रस्य (चन्द्रेण वा) सदृशः समः वरः (ಆದರೆ तुला ಮತ್ತು उपमा ಶಬ್ದಗಳನ್ನು ಬಳಸಿದಾಗ ಕೇವಲ ಷಷ್ಠೀ) चन्द्रस्य तुला, उपमा वा नास्ति।

9) ಕರ್ಮಣಿ ಭೂತಕೃದಂತವನ್ನು ವರ್ತಮಾನಕಾಲದ ಅರ್ಥದಲ್ಲಿ ಬಳಸಿದಾಗ ಅದರ ಸಂಬಂಧ ಪಟ್ಟ ಪದಕ್ಕೆ ಷಷ್ಠೀ ಬರುತ್ತದೆ. सतां मतः ಸಜ್ಜನರಿಗೆ ಮಾನ್ಯನಾದವನು. ಅಲ್ಲದೆ ಅಧಿಕರಣದ ಅರ್ಥದಲ್ಲಿ ಕೃದಂತ ಬಳಸಿದಾಗ ಕರ್ತೃವಿಗೆ ಷ.ವಿ. तस्य शयितं, भुक्तं ಮುಂ.

ವಿ.ವಿ. रामस्य शयितं भुक्तं जल्पितं हसितं स्थितम्।
प्रक्रान्तं च मुहुः पृष्ट्वा हनुमन्तं व्यसर्जयत्॥

10) ಹಾರೈಕೆ ಅಥವಾ ಆಶೀರ್ವಾದಾರ್ಥದಲ್ಲಿ आयुष्य, मद्र, भद्र, कुशल, सुख, अर्थ, हित ಮತ್ತು ಈ ಅರ್ಥದ ಶಬ್ದಗಳನ್ನು ಬಳಸಿದಲ್ಲಿ ಯಾರಿಗೆ ಆಶೀರ್ವಾದ ಮಾಡಲಾಗುವದೋ ಆ ಪದಕ್ಕೆ ಷಷ್ಠೀ ಅಥವಾ (ಚ.ವಿ.) ಬರುತ್ತದೆ. आयुष्यं भद्रं सुखं शिवस्य (शिवाय वा) भवेत्। कुशलं रामस्य रामाय वा।

11) कृते ಮತ್ತು समक्षम् ಇವುಗಳಿಗೆ ಸಂಬಂಧಪಟ್ಟ ಪದಕ್ಕೆ ಷ.ವಿ. ಬರುತ್ತದೆ. धनस्य कृते कलहः। गुरोः समक्षं शपथः। (कृते समक्षं हेतुश्च विशेषोऽन्तर भेदयोः। षष्ठी प्रयोगश्चैतेषां दूरान्तिक पदेषु च।)

12) विशेष, अन्तर, भेद ಇವುಗಳಿಗೆ ಸಂಬಂಧಿಸಿದ ಪದಕ್ಕೆ ಷ.ವಿ. तयोः विशेषः अजगजयोरिव। अजगजयोः अन्तरम्। को भेदो बकहंसयोः।

ಗಮನಿಸಿರಿ : **षष्ठी**

ऐश्वर्यस्य विभूषणं सुजनाता शौर्यस्य वाक्संयमो
ज्ञानस्योपशमः श्रुतस्य विनयो वित्तस्य पात्रे व्ययः।
अक्रोधस्तपसः क्षमा प्रभवितुः धर्मस्य निर्व्याजता
सर्वेषामपि सर्वकारणमिदं शीलं परं भूषणम्॥

को हि भारः समर्थानां किं दूरं व्यवसायिनाम्।
को विदेशः सविद्यानां कः परः प्रियवादिनाम्॥

### 7) अधिकरण कारकम्- ಸಪ್ತಮೀವಿಭಕ್ತಿ

ಕರ್ತೃ ಮತ್ತು ಕರ್ಮಗಳ ಮೂಲಕ ಕ್ರಿಯಾಪದವು ಸೂಚಿಸುವ ಕ್ರಿಯೆ ನಡೆಯುವ ಆಧಾರಕ್ಕೆ ಅಧಿಕರಣ ಎಂದು ಹೇಳಲಾಗುತ್ತದೆ. ಅಧಿಕರಣವಿದ್ದಲ್ಲಿ ಸಪ್ತಮೀ ವಿಭಕ್ತಿ ಬರುತ್ತದೆ- आधारोऽधिकरणम् (1-4-45) सप्तम्यधिकरण् (2-3-36) चैत्रः कटे (ಚಾಪೆಯ ಮೇಲೆ) शेते। पात्रे शाकं पचति। ಅಧಿಕರಣವು 6 ವಿಧ. 1) औपश्लेषक-ಸಂಸಕ್ತ 2) सामीपक-ಸಮೀಪ 3) अभिव्यापक-ವ್ಯಾಪಿಸಿದ 4) वैषयिक-ವಿಷಯಕವಾದ 5) नैमित्तिक-ನಿಮಿತ್ತದಿಂದ 6) औपचारिक-ಪ್ರಶಂಸಾಪರ. ಉದಾ -

कटे शेते कुमारोऽसौ वटे गावस्तु शेरते।
तिलेषु विद्यते तैलं तर्के च चतुरः परः।
युधिसन्नह्यते वीरोऽङ्गुल्यग्रे करिणां शतम्॥

1) ಚಾಪೆಯ ಮೇಲೆ ಕುಮಾರನು ಮಲಗುತ್ತಾನೆ, 2) ವಟವೃಕ್ಷದ ಸಮೀಪ ಆಕಳು ಮೇಯಿಸುತ್ತಾನೆ, 3) ತಿಲದಲ್ಲಿ ತೈಲ ವ್ಯಾಪಿಸಿದೆ, 4) ತರ್ಕ ವಿಷಯದಲ್ಲಿ ಚತುರ, 5) ಯುದ್ಧಕ್ಕೋಸ್ಕರ ಸಿದ್ಧತೆ, 6) ಕಿರುಬೆರಳಿನಲ್ಲಿ ಒಂದು ನೂರು ಆನೆ ಹಿಡಿಯುತ್ತಾನೆ. ಹೀಗೆ ವಿವಿಧ ಅರ್ಥಗಳಲ್ಲಿ ಸಪ್ತಮಿ ಇರುತ್ತದೆ.

1) ಕ್ರಿಯೆಯು ನಡೆಯುವ ಕಾಲವನ್ನು ಹೇಳುವ ಪದಕ್ಕೆ ಸಪ್ತಮೀ ವಿಭಕ್ತಿ ಬರುತ್ತದೆ. शरदि-न वर्षति। वसन्ते न तपति।

2) साधु ಮತ್ತು असाधु-ಈ ಶಬ್ದಗಳ ಬಳಕೆಯಲ್ಲಿ ಸಂಬಂಧಿಸಿದ ಪದಕ್ಕೆ ಸ.ವಿ. माता सुते साधु। नृपः रिपौ असाधु।

3) ಕ್ರಿಯೆಯಿಂದ ಸೂಚಿತವಾದ ಫಲ ಅಥವಾ ಉದ್ದೇಶವನ್ನು ಹೇಳುವ ಪದಕ್ಕೆ ಸ.ವಿ.- सुवर्णे विवदति-ಬಂಗಾರಕ್ಕಾಗಿ ಕಲಹ ಮಾಡುತ್ತಾರೆ. ಹೀಗೆ ಫಲಕ್ಕೋಸ್ಕರ ಸ.ವಿ. ಗೆ ಉದಾ-

6) ಹಿಂಸೆಯ ಅರ್ಥ ಹೇಳುವ जास्, नि+हन्, प्र+हन्, नट्, क्रथ ಮತ್ತು पिष् ಧಾತುಗಳನ್ನು ಬಳಸಿದಲ್ಲಿ ಸಂಬಂಧ ಸಾಮಾನ್ಯ (शेषषष्ठी) ಹೇಳಿದಾಗ ಕರ್ಮವಾಚಕಕ್ಕೆ ಷ.ವಿ. ಬರುತ್ತದೆ. चोरस्य उज्जासनं,शत्रूणां निहननं, प्रहरणम् वा। चोरस्य उन्नाटनम्, क्राथनं। (ಹಿಂಸಿಸುವದು) दुर्बलस्य पेषणम्। (ಕುಟ್ಟುವದು)

7) ಕೃದಂತದ ಮೂಲಕ ಕ್ರಿಯೆಯನ್ನು ಸೂಚಿಸುವಾಗ ಕರ್ತೃವಿನ ಅರ್ಥದಲ್ಲಿಯೂ ಕರ್ಮದ ಅರ್ಥದಲ್ಲಿಯೂ ಷಷ್ಠೀ ವಿಭಕ್ತಿ ಬರುತ್ತದೆ. कृष्णस्य कृतिः (कृष्णकर्तृककृतिः), भारतस्य वाचनम् (भारतकर्मक वाचनम्), जगतः कर्ता कृष्णः।

8) ಕರ್ಮಣಿ ವಿಧ್ಯರ್ಥ ಕೃದಂತವನ್ನು ಬಳಸಿದಾಗ ಅದರ ಕರ್ತೃವಿಗೆ ಷಷ್ಠೀ (ಅಥವಾ ತೃ.ವಿ.) ಬರುತ್ತದೆ. ಅಲ್ಲದೆ ಹೋಲಿಕೆಯನ್ನು ಸೂಚಿಸುವ सदृश, सम ಮುಂತಾದವುಗಳನ್ನು ಬಳಸಿದಲ್ಲಿ ಯಾವುದಕ್ಕೆ ಹೋಲಿಸಬೇಕಾಗಿದೆಯೋ ಆ ಶಬ್ದಕ್ಕೆ ಷಷ್ಠೀ (ಅಥವಾ ತೃ.ವಿ.). (मम मया) पितरौ सेव्यौ। चन्द्रस्य (चन्द्रेण वा) सदृशः समः वरः (ಆದರೆ तुला ಮತ್ತು उपमा ಶಬ್ದಗಳನ್ನು ಬಳಸಿದಾಗ ಕೇವಲ ಷಷ್ಠೀ) चन्द्रस्य तुला, उपमा वा नास्ति।

9) ಕರ್ಮಣಿ ಭೂತಕೃದಂತವನ್ನು ವರ್ತಮಾನಕಾಲದ ಅರ್ಥದಲ್ಲಿ ಬಳಸಿದಾಗ ಅದರ ಸಂಬಂಧ ಪಟ್ಟ ಪದಕ್ಕೆ ಷಷ್ಠೀ ಬರುತ್ತದೆ. सतां मतः ಸಜ್ಜನರಿಗೆ ಮಾನ್ಯನಾದವನು. ಅಲ್ಲದೆ ಅಧಿಕರಣದ ಅರ್ಥದಲ್ಲಿ ಕೃದಂತ ಬಳಸಿದಾಗ ಕರ್ತೃವಿಗೆ ಷ.ವಿ. तस्य शयितं, भुक्तं ಮುಂ.

ವಿ.ವಿ. रामस्य शयितं भुक्तं जल्पितं हसितं स्थितम्।
प्रक्रान्तं च मुहुः पृष्ट्वा हनुमन्तं व्यसर्जयत्॥

10) ಹಾರೈಕೆ ಅಥವಾ ಆಶೀರ್ವಾದಾರ್ಥದಲ್ಲಿ आयुष्य, मद्र, भद्र, कुशल, सुख, अर्थ, हित ಮತ್ತು ಈ ಅರ್ಥದ ಶಬ್ದಗಳನ್ನು ಬಳಸಿದಲ್ಲಿ ಯಾರಿಗೆ ಆಶೀರ್ವಾದ ಮಾಡಲಾಗುವದೋ ಆ ಪದಕ್ಕೆ ಷಷ್ಠೀ ಅಥವಾ (ಚ.ವಿ.) ಬರುತ್ತದೆ. आयुष्यं भद्रं सुखं शिवस्य (शिवाय वा) भवेत्। कुशलं रामस्य रामाय वा।

11) कृते ಮತ್ತು समक्षम् ಇವುಗಳಿಗೆ ಸಂಬಂಧಪಟ್ಟ ಪದಕ್ಕೆ ಷ.ವಿ. ಬರುತ್ತದೆ. धनस्य कृते कलहः। गुरोः समक्षं शपथः। (कृते समक्षं हेतुश्च विशेषोऽन्तर भेदयोः। षष्ठी प्रयोगश्चैतेषां दूरान्तिक पदेषु च।)

12) विशेष, अन्तर, भेद ಇವುಗಳಿಗೆ ಸಂಬಂಧಿಸಿದ ಪದಕ್ಕೆ ಷ.ವಿ. तयोः विशेषः अजगजयोरिव। अजगजयोः अन्तरम्। को भेदो बकहंसयोः।

ಗಮನಿಸಿರಿ : **षष्ठी**

ऐश्वर्यस्य विभूषणं सुजनाता शौर्यस्य वाक्संयमो
ज्ञानस्योपशमः श्रुतस्य विनयो वित्तस्य पात्रे व्ययः।
अक्रोधस्तपसः क्षमा प्रभवितुः धर्मस्य निर्व्याजता
सर्वेषामपि सर्वकारणमिदं शीलं परं भूषणम्॥

को हि भारः समर्थानां किं दूरं व्यवसायिनाम्।
को विदेशः सविद्यानां कः परः प्रियवादिनाम्॥

**7) अधिकरण कारकम्- ಸಪ್ತಮೀವಿಭಕ್ತಿ**

ಕರ್ತೃ ಮತ್ತು ಕರ್ಮಗಳ ಮೂಲಕ ಕ್ರಿಯಾಪದವು ಸೂಚಿಸುವ ಕ್ರಿಯೆ ನಡೆಯುವ ಆಧಾರಕ್ಕೆ ಅಧಿಕರಣ ಎಂದು ಹೇಳಲಾಗುತ್ತದೆ. ಅಧಿಕರಣವಿದ್ದಲ್ಲಿ ಸಪ್ತಮೀ ವಿಭಕ್ತಿ ಬರುತ್ತದೆ- आधारोऽधिकरणम् (1-4-45) सप्तम्यधिकरण् (2-3-36) चैत्रः कटे (ಚಾಪೆಯ ಮೇಲೆ) शेते। पात्रे शाकं पचति। ಅಧಿಕರಣವು 6 ವಿಧ. 1) औपश्लेषक-ಸಂಸಕ್ತ 2) सामीपक-ಸಮೀಪ 3) अभिव्यापक-ವ್ಯಾಪಿಸಿದ 4) वैषयिक-ವಿಷಯಕವಾದ 5) नैमित्तिक-ನಿಮಿತ್ತದಿಂದ 6) औपचारिक-ಪ್ರಶಂಸಾಪರ. ಉದಾ -

कटे शेते कुमारोऽसौ वटे गावस्तु शेरते।
तिलेषु विद्यते तैलं तर्के च चतुरः परः।
युधिसन्नह्यते वीरोऽङ्गुल्यग्रे करिणां शतम्॥

1) ಚಾಪೆಯ ಮೇಲೆ ಕುಮಾರನು ಮಲಗುತ್ತಾನೆ, 2) ವಟವೃಕ್ಷದ ಸಮೀಪ ಆಕಳು ಮೇಯಿಸುತ್ತಾನೆ, 3) ತಿಲದಲ್ಲಿ ತೈಲ ವ್ಯಾಪಿಸಿದೆ, 4) ತರ್ಕ ವಿಷಯದಲ್ಲಿ ಚತುರ, 5) ಯುದ್ಧಕ್ಕೋಸ್ಕರ ಸಿದ್ಧತೆ, 6) ಕಿರುಬೆರಳಿನಲ್ಲಿ ಒಂದು ನೂರು ಆನೆ ಹಿಡಿಯುತ್ತಾನೆ. ಹೀಗೆ ವಿವಿಧ ಅರ್ಥಗಳಲ್ಲಿ ಸಪ್ತಮಿ ಇರುತ್ತದೆ.

1) ಕ್ರಿಯೆಯು ನಡೆಯುವ ಕಾಲವನ್ನು ಹೇಳುವ ಪದಕ್ಕೆ ಸಪ್ತಮೀ ವಿಭಕ್ತಿ ಬರುತ್ತದೆ. शरदि-न वर्षति। वसन्ते न तपति।

2) साधु ಮತ್ತು असाधु-ಈ ಶಬ್ದಗಳ ಬಳಕೆಯಲ್ಲಿ ಸಂಬಂಧಿಸಿದ ಪದಕ್ಕೆ ಸ.ವಿ. माता सुते साधु। नृपः रिपौ असाधु।

3) ಕ್ರಿಯೆಯಿಂದ ಸೂಚಿತವಾದ ಫಲ ಅಥವಾ ಉದ್ದೇಶವನ್ನು ಹೇಳುವ ಪದಕ್ಕೆ ಸ.ವಿ.- सुवर्णे विवदति-ಬಂಗಾರಕ್ಕಾಗಿ ಕಲಹ ಮಾಡುತ್ತಾರೆ. ಹೀಗೆ ಫಲಕ್ಕೋಸ್ಕರ ಸ.ವಿ. ಗೆ ಉದಾ-

चर्मणि द्वीपिनो हन्ति दन्तयोः हन्ति कुञ्जरं।
केशेषु चमरीं हन्ति सीम्नि पुष्कलको हतः॥

(ಪುಷ್ಕಲ ಒಂದು ಜಾತಿಯ ಬೆಕ್ಕು ಅಥವಾ ಕಸ್ತೂರಿ ಮೃಗ. ಅದರ ಅಂಡಕೋಶವು (सीम्नि) ಸುವಾಸಿತವಾಗಿರುತ್ತದೆ.)

4) स्वामिन्नधिपतिः साक्षिन् प्रतिभूरीश्वरस्तथा।
दायादश्च प्रसूतश्च सप्तमी साध्वसाधुषु॥

स्वामिन्, ईश्वर, अधिपति, दायाद, साक्षिन्, प्रतिभू, प्रसूत-ಇವುಗಳ ಬಳಕೆಯಲ್ಲಿ ಸಂಬಂಧ ಪಟ್ಟ ಪದಕ್ಕೆ ಸ.ವಿ. कविषु (कवीनां वा) ईश्वरः, (गवां) गोषु स्वामी अधिपतिः वा। संपत्सु (संपदां वा) दायादः (ಪಾಲು ಇರುವವ) व्यवहारे व्यवहारस्य साक्षी प्रतिभूः (ಜಾಮೀನು) वा। गोषु (गवां वा) प्रसूतः। ಆಕಳುಗಳಿಗೆ ಸೇವೆ ಮಾಡಲು ಹುಟ್ಟಿದವನು.

5) कुशलो निपुणो दक्षः शौण्डश्च पटुरुत्सुकः-ಇವುಗಳಿಗೆ ಸಂಬಂಧವಿರುವ ಪದಕ್ಕೆ ಸ.ವಿ. कर्मणि कुशलः। कलायां निपुणः, कर्तव्ये दक्षः। वचने पटुः,चतुरः। अक्षेषु शौण्डः। ದ್ಯೂತದಲ್ಲಿ ಪ್ರವೀಣ. क्रीडायां उत्सुकः।

6) ಸಮೂಹದಿಂದ ಬೇರೆ ಎಂದು ತಿಳಿಸುವಾಗ ಸಮೂಹ ಶಬ್ದಕ್ಕೆ ಸ.ವಿ. (ಅಥವಾ ಷಷ್ಠೀ) ಬರುತ್ತದೆ. गोषु (गवां वा) कृष्णा बहुक्षीरा। दुर्गुणेषु (दुर्गुणानां वा) दर्पो महाशत्रुः।

ವಿ.ವಿ.

पुष्पेषु चम्पा पुरुषेषु रामः नारीषु रम्भा नगरीषु लङ्का।
नदीषु गङ्गा च फलेषु चाम्रम् काव्येषु माघः कवि कालिदासः॥

7) अभिलष्, अनुरञ्ज ಮತ್ತು स्निह ಧಾತುಗಳ ಬಳಕೆಯಲ್ಲಿ ಪ್ರೀತಿಸಲ್ಪಟ್ಟ ವ್ಯಕ್ತಿವಾಚಕ ಪದಕ್ಕೆ ಸ.ವಿ. ಬರುತ್ತದೆ. अस्यां अभिलषति मनः। गाढानुरक्ताः प्रकृतयः रामे। स्निह्यति मे मनः पुत्रे।

ಗಮನಿಸಿರಿ : सप्तमी

वाञ्छा सज्जनसङ्गमे गुणिगणे प्रीतिर्गुरौ नम्रता
विद्यायां व्यसनं स्वयोषिति रतिर्लोकापवादे व्यथा।
भक्तिः शूलिनि शक्तिरात्मदमने संसर्गमुक्तिः खले-
ष्वेते येषु वसन्ति निर्मलगुणास्तेभ्यो नरेभ्यो नमः॥

को वा वीचिषु बुद्बुदेषु च तडिल्लेखासु च स्त्रीषु च।
ज्वालाग्रेषु च पन्नगेषु च सरिद्वेगेषु च प्रत्ययः॥

धर्म्यासु कामार्थयशस्करीषु मतासु लोकेऽधिगतासु काले।
विद्यासु विद्वानिव सोऽभिरेमे पत्नीषु राजा तिसृषूत्तमासु॥

## सतः षष्ठी ಮತ್ತು सतिसप्तमी

1) ಅನಾದರ ತೋರಿ ಒಂದು ಕ್ರಿಯೆಯನ್ನು ಅನುಸರಿಸಿ ಇನ್ನೊಂದು ಕ್ರಿಯೆ ನಡೆಯುತ್ತಿದ್ದಾಗ ಮೊದಲ ಕ್ರಿಯೆಯನ್ನು ಸೂಚಿಸುವ ಕೃದಂತ ಅಥವಾ ಧಾತುಸಾಧಿತ ವಿಶೇಷಣವು, ಅದರ ವಿಶೇಷ್ಯವು [1] ಷಷ್ಠೀ ವಿಭಕ್ತಿಯಲ್ಲಿರಬೇಕು. गुरोः पश्यतः शिष्यः अविनयमाचरति। गुरुं अनादृत्य ಎಂದು ಅರ್ಥ. पश्यतो गृहजनस्य हरिः रुक्मिणीं अपाहरत्।

2) ಒಂದು ಕ್ರಿಯೆಯು ನಡೆಯುತ್ತಿದ್ದಾಗ ಇನ್ನೊಂದು ಕ್ರಿಯೆಯು ನಡೆಯುತ್ತಿದ್ದು ಆ ಕ್ರಿಯೆಯನ್ನು ಹೇಳುವ ಕೃದಂತ ಅಥವಾ ಧಾತುಸಾಧಿತ ವಿಶೇಷಣ ಮತ್ತು ವಿಶೇಷ್ಯವು ಸಪ್ತಮಿ ವಿಭಕ್ತಿಯಲ್ಲಿರುತ್ತದೆ. ಇದಕ್ಕೆ सति सप्तमी ಎನ್ನುತ್ತಾರೆ. उदिते सूर्ये सः पितृसेवां प्रारभत। पौरवे शासति सति सः शरणमागतः। इत्थं विचिन्तयति कोशगते द्विरेफे।

रामो राजमणिः सदा विजयते रामं रमेशं भजे
रामेणाभिहता निशा-चरचमू रामाय तस्मै नमः।
रामान्नास्ति परायणं परतरं रामस्य दासोऽस्म्यहं
रामे चित्तलयः सदा भवतु मे भो राम मामुद्धर॥



---

1. ಸಾಮಾನ್ಯವಾಗಿ ಒಂದು ವಸ್ತುವನ್ನು ವರ್ಣಿಸುವ ಶಬ್ದ ವಿಶೇಷಣ, ವರ್ಣಿಸಲ್ಪಡುವ ವಸ್ತುವಾಚಕ ಶಬ್ದ ವಿಶೇಷ್ಯ. विनीतो बालः वृद्धां मातरं सेवते। ಎಂಬಲ್ಲಿ विनीतः ಮತ್ತು वृद्धां ವಿಶೇಷಣಗಳು. बालः ಮತ್ತು मातरं ವಿಶೇಷ್ಯಗಳು.

# ಅಧ್ಯಾಯ ೯
# ಕ್ರಿಯಾಪದಗಳು

ಕ್ರಿಯೆಯನ್ನು ಸೂಚಿಸುವ ಪದವೇ ಕ್ರಿಯಾಪದ. रामः पाठं लिखति ಎಂಬ ವಾಕ್ಯದಲ್ಲಿ ರಾಮನು ಮಾಡುತ್ತಿರುವ ಬರೆಯುವ ಕ್ರಿಯೆಯನ್ನು ಹೇಳುವ 'लिखति' ಎಂಬುದೇ ಕ್ರಿಯಾಪದವಾಗಿದೆ. ಇಂತಹ ಕ್ರಿಯಾಪದದ ಮೂಲರೂಪಕ್ಕೆ 'ಧಾತು' ಎನ್ನಲಾಗುವದು. ಈ ಧಾತುಗಳಿಗೆ ಕೆಲವು ಪ್ರತ್ಯಯಗಳನ್ನು ಹಚ್ಚಿದಾಗ ಅವು ಕ್ರಿಯಾಪದಗಳಾಗುತ್ತವೆ. ಆ ಪ್ರತ್ಯಯಗಳಿಗೆ ಆಖ್ಯಾತ (तिङ्) ಪ್ರತ್ಯಯಗಳೆಂದು ಹೆಸರು. लिखति ಎಂಬಲ್ಲಿ लिख् ಧಾತುವಿಗೆ ति ಎಂಬ ಪ್ರತ್ಯಯ ಸೇರಿಸಲಾಗಿದೆ. ಅವುಗಳನ್ನು ಸೇರಿಸುವಾಗ ಉಂಟಾಗುವ ಕೆಲವು ಬದಲಾವಣೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ನೋಡೋಣ.

ಕ್ರಿಯಾಪದಗಳನ್ನು ಸಾಮಾನ್ಯವಾಗಿ 5 ತರಹ ವಿಂಗಡಿಸಬಹುದು. 1) ಮೂಲಧಾತುಗಳಿಗೆ ಆಖ್ಯಾತಪ್ರತ್ಯಯ ಸೇರಿಸಿದವುಗಳು (चलति), 2) ಪ್ರೇರಣಾರ್ಥಕಗಳು, लेखयति (ಬರೆಸುತ್ತಾನೆ), 3) ಇಚ್ಛಾರ್ಥಕಗಳು विवक्षति (ಹೇಳಲು ಇಚ್ಛಿಸುತ್ತಾನೆ) 4) ನಾಮಸಾಧಿತ ಕ್ರಿಯಾಪದಗಳು, विपिनायते (ಅಡವಿಯಂತಾಗುತ್ತದೆ) ಮತ್ತು 5) ಅತಿಶಯಾರ್ಥಕಗಳು वरीवृत्यते (ಹೆಚ್ಚು ಹೆಚ್ಚು ಇರುತ್ತದೆ). ಮೊದಲನೆಯ ತರಹದ ಕ್ರಿಯಾಪದಗಳೇ ಹೆಚ್ಚು ವ್ಯಾಪಕವಾಗಿ ಬಳಸಲಾಗುತ್ತವೆ. ಮೊದಲು ಅವುಗಳನ್ನೇ ನೋಡೋಣ.

## ಪರಸ್ಮೈಪದ ಮತ್ತು ಆತ್ಮನೇಪದ

ಧಾತುಗಳಿಗೆ ಸೇರಿಸುವ ಆಖ್ಯಾತ ಪ್ರತ್ಯಯಗಳು ಎರಡು ವಿಧ. 1) ಪರಸ್ಮೈಪದ ಮತ್ತು 2) ಆತ್ಮನೇ ಪದ. ಕೇವಲ ಪರಸ್ಮೈಪದ ಪ್ರತ್ಯಯಗಳನ್ನು ತೆಗೆದುಕೊಳ್ಳುವ ಧಾತುಗಳು 'ಪರಸ್ಮೈಪದೀ' ಧಾತುಗಳು. ಕೇವಲ ಆತ್ಮನೇಪದ ಪ್ರತ್ಯಯಗಳನ್ನು ತೆಗೆದುಕೊಳ್ಳುವ ಧಾತುಗಳು 'ಆತ್ಮನೇಪದೀ' ಧಾತುಗಳೆಂದೂ,[1] ಎರಡೂ ತರಹದ ಆಖ್ಯಾತಪ್ರತ್ಯಯಗಳನ್ನು

---

1. ಪರಸ್ಮೈಪದ ಮತ್ತು ಆತ್ಮನೇಪದ ಈ ಹೆಸರುಗಳು ಸಾರ್ಥಕವೇ ಇರುತ್ತವೆ ಎನ್ನಬಹುದು. ಕ್ರಿಯೆಯ ಫಲವೂ ಪರರಿಗೆ (परस्मै) ಹೋಗುವುದಾದರೆ ಪರಸ್ಮೈಪದೀ ಪ್ರತ್ಯಯವನ್ನು, ತನಗೇ (आत्मने) ಬರುವದಾದರೆ ಆತ್ಮನೇಪದವನ್ನು ಬಳಸಬೇಕು. (क्रियाफले कर्तृगामिनि सति आत्मनेपदप्रत्ययाः, अन्यगामिनि तु परस्मैपदप्रत्ययाः इत्यर्थः ।) ಉದಾ : ರಾಮನು ತನ್ನ ಸಲುವಾಗಿ ಹೋಮ ಮಾಡುತ್ತಾನೆ ಎಂಬ ಅರ್ಥದಲ್ಲಿ यज ಧಾತುವಿಗೆ 'ते' ಎಂಬ ಆತ್ಮನೇ ಪದ ಪ್ರತ್ಯಯವನ್ನು ಬಳಸಲಾಗಿದೆ. 'यजति' ಎಂದು ಪ್ರಯೋಗಿಸಿದರೆ ಯಜ್ಞದ⇨

ತೆಗೆದುಕೊಳ್ಳುವಂಥವು 'ಉಭಯಪದೀ' ಧಾತುಗಳೆಂದು ಹೇಳುತ್ತಾರೆ. ಸು. 2000 ಕ್ಕೂ ಹೆಚ್ಚು ಧಾತುಗಳು ಸಂಸ್ಕೃತದಲ್ಲಿದ್ದರೂ ಪರಸ್ಮೈಪದೀ ಧಾತುಗಳೇ ಹೆಚ್ಚು ಬಳಕೆಯಲ್ಲಿ ಸುಲಭವಾಗಿವೆ. ಏನೇ ಆದರೂ ಧಾತುಗಳಿಗೆ ಆಖ್ಯಾತಪ್ರತ್ಯಯಗಳನ್ನು ಸೇರಿಸುವಾಗ ಮಾತ್ರ ಆ ಧಾತುಗಳ 'ಪದ'ಗಳನ್ನು ತಿಳಿದುಕೊಳ್ಳುವದು ಅನಿವಾರ್ಯ.

ಇನ್ನು ಕೆಲವು ಧಾತುಗಳಿಗೆ ಕೆಲವು ಉಪಸರ್ಗಗಳನ್ನು ಸೇರಿಸಿದಾಗ 'ಪದ'ಗಳು ಬದಲಾಗುತ್ತವೆ. ಅವುಗಳನ್ನು ಅವ್ಯಯ ಪ್ರಕರಣದಲ್ಲಿ ನೋಡಬಹುದು.

ಸಂಸ್ಕೃತದಲ್ಲಿ 3 ಪುರುಷಗಳು, 3 ವಚನಗಳಿವೆ ಎಂಬುದನ್ನು ಈಗಾಗಲೇ 3ನೇ ಅಧ್ಯಾಯದಲ್ಲಿ ನೋಡಿದ್ದೇವೆ. ಧಾತುಗಳಿಗೆ ಆಖ್ಯಾತಪ್ರತ್ಯಯಗಳನ್ನು ಹಚ್ಚುವಾಗ ಕ್ರಿಯಾಪದವು ಯಾರಿಗೆ ಸಂಬಂಧಿಸಿದ್ದು ಎಂಬುದನ್ನು ತಿಳಿದುಕೊಂಡಿರಲೇಬೇಕು. 'ನಾನು' 'ನಾವಿಬ್ಬರೂ' ಅಥವಾ 'ನಾವು' ಎಂಬುದಕ್ಕೆ ಕ್ರಿಯಾಪದ ಬಳಸಬೇಕಾದರೆ ಉತ್ತಮಪುರುಷದ ಪ್ರತ್ಯಯ ಹಚ್ಚಬೇಕು (अस्मच्छब्दवाच्येऽर्थे उत्तमपुरुषः); 'ನೀನು' 'ನೀವಿಬ್ಬರೂ' 'ನೀವು' ಎಂಬುದಕ್ಕೆ ಮಾತ್ರ ಮಧ್ಯಮಪುರುಷವನ್ನು (युष्मच्छब्दवाच्येऽर्थे मध्यमः); ಉಳಿದವುಗಳಿಗೆ ಪ್ರಥಮಪುರುಷವನ್ನು (शेषे प्रथमः) ಬಳಸಬೇಕು. (ಅಂದರೆ ಅವನು, ಅವರಿಬ್ಬರು, ಅವರು, ಅವಳು, ಅದು, ಇವನು, ಇವಳು, ಇದು, ರಾಮ, ಕೃಷ್ಣ, ತರು, ಲತಾ ಇತ್ಯಾದಿ ಉಳಿದ ಎಲ್ಲ ಶಬ್ದಗಳೂ). भवान् = ತಾವು (ಪು) ಮತ್ತು भवती = ತಾವು (ಸ್ತ್ರೀ) ಇವು ಕೂಡ ಪ್ರಥಮ ಪುರುಷವನ್ನೇ ತೆಗೆದುಕೊಳ್ಳುತ್ತವೆ. (भवद्योगे प्रथमः). ಉದಾ - भवान् ಅಥವಾ भवती- गच्छतु = ತಾವು ಹೋಗಬೇಕು.

ಕೆಲವು ಸಲ ಉತ್ತಮ ಮತ್ತು ಮಧ್ಯಮ ಪುರುಷದ ಆಖ್ಯಾತ ಪ್ರತ್ಯಯಗಳನ್ನು ಬಳಸುವಾಗ अस्मत् ಶಬ್ದ ಮತ್ತು युष्मत् ಶಬ್ದ ಬಳಸದಿದ್ದರೂ ಕೇವಲ ಕ್ರಿಯಾಪದ ಪ್ರಯೋಗದಿಂದ ಆ ಪುರುಷಗಳು ಗತಾರ್ಥವಾಗುತ್ತವೆ. ಉದಾ - गच्छसि, लिखामि ಮುಂ. ಮೂರೂ ಪುರುಷಗಳಿಗೆ ಭಿನ್ನಭಿನ್ನವಾಗಿ ಆಖ್ಯಾತ ಪ್ರತ್ಯಯಗಳಿರುವಂತೆ ಮೂರೂ ವಚನಗಳಿಗೂ ಅಂದರೆ ಏಕವಚನ (ಒಂದು) ದ್ವಿವಚನ (ಎರಡು) ಬಹುವಚನ (ಮೂರು ಅಥವಾ ಮೂರಕ್ಕಿಂತ

---

➪ ಫಲವು ಇನ್ನೊಬ್ಬರಿಗೆ (ಯಜಮಾನನಿಗೆ) ಹೋಗುವುದಕ್ಕೆ ಯಜ್ಞ ಮಾಡುತ್ತಾನೆ ಎಂದರ್ಥ. ತನ್ನ ಸಲುವಾಗಿ ದೇವರ ಪೂಜೆಗೆ ಸಂಕಲ್ಪ ಮಾಡುವಾಗ पूजां करिष्ये ಎಂದು ಹೇಳುವದು; ಪರರ ಸಲುವಾಗಿ ಸಂಕಲ್ಪ ಮಾಡುವಾಗ पूजां करिष्यामि ಎಂದು ಹೇಳಬಹುದು. ಆದರೂ ಸಾಮಾನ್ಯ ವ್ಯವಹಾರದಲ್ಲಿ ಈ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವದು ಕಂಡುಬರುವದಿಲ್ಲ. ಹೀಗಿದ್ದರೂ ಆಖ್ಯಾತ ಪ್ರತ್ಯಯಗಳನ್ನು ವ್ಯಾಕರಣಶಾಸ್ತ್ರದ ನಿಯಮಕ್ಕನುಸರಿಸಿ ಬಳಸಬೇಕೆಂಬುದು ಮಾತ್ರ ಗಮನಾರ್ಹ.

ಹೆಚ್ಚು), ಇವುಗಳಿಗೂ ಬೇರೆ ಬೇರೆ ಆಖ್ಯಾತ ಪ್ರತ್ಯಯಗಳೇ ಇರುತ್ತವೆ. 3 ಪುರುಷಗಳು ಮತ್ತು 3 ವಚನಗಳು, ಹೀಗೆ 9 ಆಖ್ಯಾತ ಪ್ರತ್ಯಯಗಳು ಪರಸ್ಮೈಪದಿಯಲ್ಲಿ ಮತ್ತು 9 ಆತ್ಮನೇ ಪದಿಯಲ್ಲಿ ಒಟ್ಟು 18 ಆಖ್ಯಾತ ಪ್ರತ್ಯಯಗಳಿರುತ್ತವೆ. ಹೀಗೆ ಪುರುಷ ಮತ್ತು ವಚನಗಳಿಗನುಸರಿಸಿ ಆಖ್ಯಾತ ಪ್ರತ್ಯಯಗಳನ್ನು ಸರಿಯಾಗಿ ಸೇರಿಸಿ ಕ್ರಿಯಾಪದಗಳನ್ನು ತಯಾರಿಸಿಕೊಳ್ಳಬೇಕು.

ದಶ ಲಕಾರಗಳು (7 ಕಾಲ, 3 ಅರ್ಥ) ಬೇರೆ ಬೇರೆ 'ಕಾಲ 'ಮತ್ತು 'ಅರ್ಥ'ಗಳನ್ನು ಸೂಚಿಸಲು ಧಾತುಗಳಿಗೆ ಹತ್ತು ತರಹದ ಆಖ್ಯಾತ (तिङ्) ಪ್ರತ್ಯಯಗಳನ್ನು ಸೇರಿಸಿ ಕ್ರಿಯಾಪದಗಳನ್ನು ಪಡೆಯಬಹುದು. ವರ್ತಮಾನ, ಭೂತ ಮತ್ತು ಭವಿಷ್ಯತ್ ಎಂದು ಮೂರು ವಿಧವಾದ ಕಾಲವಂತೂ ಪ್ರಸಿದ್ಧವೇ. ಈಗ ನಡೆಯುತ್ತಿರುವ ಕ್ರಿಯೆಯನ್ನು ಸೂಚಿಸಲು ವರ್ತಮಾನ ಕಾಲದ ಕ್ರಿಯಾಪದವನ್ನೂ, ಹಿಂದೆ ಆಗಿ ಹೋದ ಕ್ರಿಯೆಯನ್ನು ಸೂಚಿಸಲು ಭೂತಕಾಲದ ಕ್ರಿಯಾಪದವನ್ನೂ, ಮುಂದೆ ನಡೆಯಲಿರುವ ಕ್ರಿಯೆಯನ್ನು ಸೂಚಿಸಲು ಭವಿಷ್ಯತ್‌ಕಾಲದ ಕ್ರಿಯಾಪದವನ್ನೂ ಬಳಸಲಾಗುವದು. ಆದರೆ ಸಂಸ್ಕೃತದಲ್ಲಿ ಮಾತ್ರ ಸೂಕ್ಷ್ಮ ಭೇದಗಳನ್ನು ಪರಿಶೀಲಿಸಿ ಕಾಲವನ್ನು (Tense) 7 ರೀತಿಯಲ್ಲಿ ವಿಭಾಗಿಸಿದ್ದಾರೆ.

1. लट् - ವರ್ತಮಾನಕಾಲ
2. लिट् - ಅನದ್ಯತನ ಪರೋಕ್ಷಭೂತಕಾಲ
3. लङ् - ಅನದ್ಯತನ ಭೂತಕಾಲ
4. लुङ् - ಸಾಮಾನ್ಯ ಭೂತಕಾಲ
5. लृट् - ಸಾಮಾನ್ಯ ಭವಿಷ್ಯತ್‌ಕಾಲ
6. लुट् - ಅನದ್ಯತನ ಭವಿಷ್ಯತ್‌ಕಾಲ
7. लृङ् - ಸಂಭಾವ್ಯ ಭವಿಷ್ಯತ್‌ಕಾಲ

ಹೀಗೆಯೇ 3 ಅರ್ಥಗಳಿವೆ (Moods)-1) लोट्-ಆಜ್ಞಾರ್ಥ, 2) आशीर्लिङ् - ಆಶೀರ್ವಾದಾರ್ಥ 3) विधिलिङ् - ವಿಧ್ಯರ್ಥ.

ಈ ಹತ್ತು ವಿಭಾಗಗಳಿಗೆ ಸಂಸ್ಕೃತದಲ್ಲಿ 'लकार' ಎಂಬ ಪಾರಿಭಾಷಿಕ ಶಬ್ದವಿದೆ. ಈ ವಿಭಾಗಗಳು ल ದಿಂದ ಪ್ರಾರಂಭವಾದುದೇ ಈ ಹೆಸರಿಗೆ ಕಾರಣವಾಗಿರಬಹುದು. (आशीर्लिङ् ಮತ್ತು विधिलिङ् ಇವು लिङ् ದ ಪ್ರಭೇದಗಳು) ಈ दशलकार ಗಳನ್ನು ಈ ಕೆಳಗಿನ ಶ್ಲೋಕದಿಂದ ಕಂಠಪಾಠ ಮಾಡಿಕೊಳ್ಳಬೇಕು.

लड् वर्तमाने लेड्वेदे [2] भूते लुङ्लङ्लिटस्तथा
विध्याशिषोश्च लिङ्लोटौ लृङ्लृटौ लुड् भविष्यति ।

---

2. ಲೇಟ್ ಎಂಬುದು ವೇದದಲ್ಲಿ ಮಾತ್ರ ಬಳಸಲಾಗುವದು. लिङ् ದ ಎರಡು ಭೇದಗಳನ್ನು ಈ ಶ್ಲೋಕದಲ್ಲಿ ಉಲ್ಲೇಖಿಸಿದೆ. ಹೀಗೆ ಒಟ್ಟು 10 ಲಕಾರಗಳು.

## ಸವಿಕರಣ (ಸಾರ್ವಧಾತುಕ) ಮತ್ತು ಅವಿಕರಣ (ಆರ್ಧಧಾತುಕ) ಲಕಾರಗಳು

ಈ ದಶಲಕಾರಗಳ ಕೆಲವು ಲಕಾರಗಳಲ್ಲಿ ಧಾತುಗಳಿಗೆ ಆಖ್ಯಾತ (तिङ्) ಪ್ರತ್ಯಯಗಳನ್ನು ಸೇರಿಸುವಾಗ ಮಧ್ಯದಲ್ಲಿ ಒಂದು ಪ್ರತ್ಯಯವನ್ನು ಸೇರಿಸಬೇಕಾಗುತ್ತದೆ. ಆ ಪ್ರತ್ಯಯಕ್ಕೆ 'ವಿಕರಣ' ಎಂದು ಕರೆಯಲಾಗುವದು. ಯಾವ ಲಕಾರಗಳನ್ನು ಬಳಸುವಾಗ ಈ ವಿಕರಣಗಳು ಸೇರುತ್ತವೆಯೋ ಅಂಥ ಲಕಾರಗಳಿಗೆ 'ಸಾರ್ವಧಾತುಕ' ಅಥವಾ 'ಸವಿಕರಣ' ಲಕಾರಗಳೆನ್ನುವರು. ಹೀಗೆ लट्- ವರ್ತಮಾನ, लङ्-ಅನದ್ಯತನ ಭೂತಾರ್ಥ, लोट्-ಆಜ್ಞಾರ್ಥ ಮತ್ತು विधिलिङ्-ವಿಧ್ಯರ್ಥ ಈ ನಾಲ್ಕು ಲಕಾರಗಳು ಸವಿಕರಣ ಲಕಾರಗಳಾಗಿವೆ.

ಉಳಿದ ಆರು ಲಕಾರಗಳಲ್ಲಿ ಅಂದರೆ लिट्-ಅನದ್ಯತನ ಪರೋಕ್ಷಭೂತಾರ್ಥ, लुङ्-ಸಾಮಾನ್ಯ ಭೂತಕಾಲ, लृट्-ಸಾಮಾನ್ಯ ಭವಿಷ್ಯತ್, लुट्-ಅನದ್ಯತನ ಭವಿಷ್ಯತ್, लृङ्-ಸಂಭಾವ್ಯ ಭವಿಷ್ಯತ್, आशीर्लिङ्-ಆಶೀರರ್ಥ. ಇವುಗಳಲ್ಲಿ ಧಾತು ಮತ್ತು ಆಖ್ಯಾತಪ್ರತ್ಯಯಗಳ ಮಧ್ಯದಲ್ಲಿ 'ವಿಕರಣವು' ಬರುವದಿಲ್ಲ. ಆದ್ದರಿಂದ ಇವು 'ಅವಿಕರಣ' ಅಥವಾ 'ಆರ್ಧಧಾತುಕ' ಲಕಾರಗಳಾಗಿರುತ್ತವೆ.

## ಹತ್ತು ಗಣಗಳು

ಸಾರ್ವಧಾತುಕ ಲಕಾರಗಳಲ್ಲಿ ಧಾತು ಮತ್ತು ತಿಙ್ (ಆಖ್ಯಾತ) ಪ್ರತ್ಯಯಗಳ ನಡುವೆ ಬರುವ ವಿಕರಣವು ಎಲ್ಲ ಧಾತುಗಳಿಗೂ ಒಂದೇ ಇರುವದಿಲ್ಲ. ಅವುಗಳ ವೈವಿಧ್ಯತೆಗೆ ಅನುಸರಿಸಿ ಧಾತುಗಳನ್ನು ಹತ್ತು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಈ ಗುಂಪುಗಳಿಗೆ 'ಗಣ' ಎನ್ನುತ್ತಾರೆ. ಪಾಣಿನಿಯ ಧಾತುಪಾಠದಲ್ಲಿ ಇವುಗಳ ವ್ಯವಸ್ಥೆಯನ್ನು ಕಾಣಬಹುದು. ಪ್ರತಿಯೊಂದು ಗಣದ ಮೊದಲಿನ ಧಾತುವಿನ ಹೆಸರನ್ನೇ ಆ ಸಂಪೂರ್ಣ (आदि ಶಬ್ದ ಸೇರಿಸಿ) ಗಣಕ್ಕೆ ಕರೆಯಲಾಗಿದೆ. ಕೆಳಗಿನ ಪಟ್ಟಿಯಲ್ಲಿ ಆಯಾಗಣದ ಧಾತುವಿಗೆ ಆಯಾ ವಿಕರಣವನ್ನು ಸೇರಿಸಿ लट् (ವರ್ತಮಾನಕಾಲ) ಪ್ರಥಮಪುರುಷ ಏಕವಚನದ ति (ಪರಸ್ಮೈಪದ) ಅಥವಾ ते (ಆತ್ಮನೇಪದ) ಈ ಆಖ್ಯಾತಪ್ರತ್ಯಯವನ್ನು ಸೇರಿಸಿದಾಗ ಸಿದ್ಧವಾಗುವ ಕ್ರಿಯಾಪದದ ರೂಪಗಳನ್ನು ನೋಡಬಹುದು.

| ಗಣ | ಹೆಸರುಧಾತು | ವಿಕರಣ | | (लट् प्र.ए.व.) |
|---|---|---|---|---|
| 1 | भ्वादिः | भू | अ | भवति |
| 2 | अदादिः | अद् | – | अत्ति |
| 3 | जुहोत्यादिः | हु | द्वित्व | जुहोति |
| 4 | दिवादिः | दिव् | य | दीव्यति |
| 5 | स्वादिः | सु | नु | सुनोति, सुनुते |
| 6 | तुदादिः | तुद् | अ | तुदति, तुदते |

| | | | | |
|---|---|---|---|---|
| 7 | रुधादिः | रुध् | त | रुणद्धि, रुन्धे |
| 8 | तनादिः | तन् | उ | तनोति, तनुते |
| 9 | क्र्यादिः | क्री | ना | क्रीणाति, क्रीणीते |
| 10 | चुरादिः | चुर् | अय | चोरयति, चोरयते |

ಈ ಹತ್ತು ಗಣಗಳ ಹೆಸರುಗಳಿರುವ ಈ ಕೆಳಗಿನ ಶ್ಲೋಕವನ್ನು ಕಂಠಪಾಠ ಮಾಡಿರಿ.

भ्वाद्यदादि-जुहोत्यादि-दिवादि-स्वादिपञ्चमाः ।
तुदादिश्च रुधादिःस्यात् तनक्र्याचुरगणा दश ॥

ಆಖ್ಯಾತ (तिङ्) ಪ್ರತ್ಯಯವನ್ನು ಸೇರಿಸುವದಕ್ಕಿಂತ ಪೂರ್ವದಲ್ಲಿ ಧಾತು ಮತ್ತು ವಿಕರಣ ಸೇರಿ ಉಂಟಾಗುವ ರೂಪಕ್ಕೆ अङ्ग ಎನ್ನುತ್ತಾರೆ. ಈ ಅಂಗಗಳನ್ನು ಅನುಸರಿಸಿ ಮೇಲೆ ಸೂಚಿಸಿದ ಹತ್ತು ಗಣಗಳ ಧಾತುಗಳನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ. 1, 4, 6 ಮತ್ತು 10ನೇ ಗಣಗಳ ಧಾತುಗಳು ಮೊದಲನೆಯ ಗುಂಪಿಗೆ ಸೇರುತ್ತವೆ. ಈ ಗುಂಪಿನಲ್ಲಿ ಧಾತುಗಳ ಅಂಗಗಳ ಕೊನೆಗೆ 'अ' ಬರುತ್ತದೆ. ಉದಾ : लिख् (1ನೇ ಗಣ भ्वादिः)अ+लिख (ಅಂಗ) + ति = लिखति; नृत् (4ನೇ ಗಣ दिवादिः)नृत्य (ಅಂಗ)+ ति = नृत्यति; विश् (6ನೇ ಗಣ) विश + ति = विशति; रच् (10ನೇ ಗಣ) रचय + ति = रचयति.

2, 3, 5, 7, 8 ಮತ್ತು 9ನೆಯ ಗಣಗಳ ಧಾತುಗಳು ಎರಡನೆಯ ಗುಂಪಿಗೆ ಸೇರುತ್ತವೆ. ಈ ಧಾತುಗಳಿಗೆ ವಿಕರಣ ಸೇರಿ ತಯಾರಾದ ಅಂಗಗಳ ಕೊನೆಗೆ 'अ' ಬರುವದಿಲ್ಲ. ಉದಾ : अस् (2ನೇ ಗಣ) अस् (ಅಂಗ) + ति = अस्ति; चि (5ನೇ ಗಣ) चिनु (ಅಂಗ)+ ते =चिनुते; प्री (9ನೇ ಗಣ) प्रीणा + ति = प्रीणाति ಮುಂತಾದವುಗಳು.

ಒಟ್ಟಾರೆ ಹೀಗೆ ತಿಳಿಯಬಹುದು. धातुः + विकरणम् + आख्यातप्रत्ययः = क्रियापदम् । उदा- लिख्+ अ+ ति = लिखति, पठतु, अभवत् ಮುಂತಾದವುಗಳು.

ಧಾತುಗಳ ಬಗ್ಗೆ ಸೋಜಿಗದ ಅಂಶವೆಂದರೆ, ಒಂದೇ ಧಾತು ಬೇರೆ ಬೇರೆ ಗಣಗಳಲ್ಲಿ ಕಂಡುಬರುತ್ತದೆ. ಉದಾ: धुञ् (ಕಂಪನ) ಎಂಬ ಧಾತು 1,5,6,9 ಮತ್ತು 10ನೇ ಗಣಗಳಲ್ಲಿ ಬಂದಿದೆ. ಅದರ ವಿವಿಧ ರೂಪಗಳನ್ನು ಕೆಳಗೆ, ನೋಡಬಹುದು-

धूनोति चम्पकवनानि धुनोत्यशोकं
चूतं धुनाति धुवति स्फुटितातिमुक्तम् ।
वायुर्विधूनयति चम्पक-पुष्परेणून्
यत् कानने धवति चन्दन मञ्जरीश्च ॥

(धुनोति-धु-(5) ಧಾತುವಿನ ರೂಪ) ಇಲ್ಲಿ ಕ್ರಮವಾಗಿ 9,6,10 ಮತ್ತು 1 ಈ ಗಣಗಳಲ್ಲಿಯ ರೂಪಗಳಿವೆ.

ಇನ್ನು ಕೆಲವು ಧಾತುಗಳು ಬೇರೆ ಬೇರೆ ಅರ್ಥವನ್ನು ಹೊಂದಿವೆ. ಉದಾ : सु-ಧಾತುವು 1ನೇ ಗಣ, ಉಭಯಪದಿ सुवति, सुवते - ಗಮನ ಎಂಬ ಅರ್ಥದಲ್ಲಿದೆ. 3ನೇ ಗಣದಲ್ಲಿ ಪರಸ್ಮೈಪದಿ सवति, सौति - ಶಾಸನಮಾಡು ಎಂಬ ಅರ್ಥದಲ್ಲಿದೆ. 5ನೇ ಗಣದಲ್ಲಿ ಉಭಯಪದಿ सुनोति, सुनुते - ಸುರಿಯುತ್ತಾನೆ ಎಂಬ ಅರ್ಥದಲ್ಲಿದೆ.

ಕೆಲವು ಧಾತುಗಳು ಬೇರೆ ಬೇರೆ ಪದಗಳಲ್ಲಿ ಅರ್ಥ ಬೇರೆಯಾಗುತ್ತವೆ. भू-ಧಾತು-ಪರಸ್ಮೈಪದಿ - ಇರುವಿಕೆ ಎಂಬ ಅರ್ಥ. ಅದೇ भू-प्राप्तौ (ಪಡೆ) ಎಂಬ ಅರ್ಥದಲ್ಲಿ ಆತ್ಮನೇಪದ ರೂಪ ಪಡೆಯುತ್ತದೆ-भवते.

ಮತ್ತೆ ಕೆಲವು ಧಾತುಗಳು ಉಪಸರ್ಗಗಳಿಂದ ತಮ್ಮ ಪದಗಳನ್ನು ಬದಲಿಸುತ್ತವೆ. ಅವುಗಳನ್ನು ಅವ್ಯಯ ಪ್ರಕರಣದಲ್ಲಿ ಹೇಳಲಾಗಿದೆ. ಏನೇ ಆದರೂ ಈ ಸೂಕ್ಷ್ಮ ಅಂಶಗಳನ್ನು ಅರಿತುಕೊಂಡು ಧಾತುಗಳಿಗೆ ಸರಿಯಾದ ಪ್ರತ್ಯಯಗಳಿಂದ ಕ್ರಿಯಾಪದಗಳನ್ನು ಪಡೆಯಬಹುದು.

## ದಶಲಕಾರಗಳ ಪ್ರತ್ಯಯಗಳು

ಮೇಲೆ ನೋಡಿದ 6 ಕಾಲ ಮತ್ತು 4 ಅರ್ಥಗಳಲ್ಲಿ 1) ಸಾರ್ವಧಾತುಕ (ಸವಿಕರಣ) ಮತ್ತು 2) ಆರ್ಧಧಾತುಕ (ಅವಿಕರಣ) ರೂಪಗಳ ವಿಶೇಷಾಂಶಗಳನ್ನು ತಿಳಿಯೋಣ.

### 1) ಸಾರ್ವಧಾತುಕ ಅಥವಾ ಸವಿಕರಣ ಲಕಾರಗಳ ರೂಪಗಳು

#### 1) लट्लकार - (ವರ್ತಮಾನಕಾಲ) (PRESENT TENSE)

ಈಗ ನಡೆಯುವ ಅಥವಾ ನಡೆಯುತ್ತಿರುವ ಕ್ರಿಯೆಯನ್ನು ಹೇಳುವಾಗ ಈ ಲಕಾರದ ಕ್ರಿಯಾಪದವನ್ನು ಬಳಸಬೇಕು. ಉದಾ : रमेशः लिखति-ರಮೇಶನು ಬರೆಯುತ್ತಾನೆ-ಈ ವಾಕ್ಯ ಹೇಳುವಾಗ ರಮೇಶನ ಬರೆಯುವ ಕ್ರಿಯೆಯು ನಡೆದಿದೆ. ಬರೆಯುತ್ತಿದ್ದಾನೆ ಎಂಬ ಅರ್ಥವೂ ತೋರುತ್ತಿದೆ. ಅಂತೆಯೇ लिखति ಎಂದು ವರ್ತಮಾನಕಾಲದ ಕ್ರಿಯಾಪದವನ್ನು ಬಳಸಲಾಗಿದೆ.

ಧಾತುವಿಗೆ ಆಯಾ ಗಣದ ವಿಕರಣವನ್ನು ಸೇರಿಸಿ ವರ್ತಮಾನಕಾಲದ ಪ್ರತ್ಯಯವನ್ನು ಹಚ್ಚಿದಾಗ लट् ಲಕಾರದ ರೂಪ ತಯಾರಾಗುತ್ತದೆ - लिख् + अ+ ति = लिखति. अस्ति महारण्ये जम्बुकः ಎಂಬಲ್ಲಿ ವರ್ತಮಾನಕಾಲದ ರೂಪವಿದೆ. 'अस्ति' ಎಂಬ ಅವ್ಯಯವೂ ಉಂಟು. अव्ययानाम् अनेकार्थत्वं (ಅವ್ಯಯಗಳಿಗೆ ಅನೇಕ ಅರ್ಥಗಳು) ಎಂಬಂತೆ 'अस्ति' ಎಂಬುದಕ್ಕೆ 'ಇತ್ತು' ಎಂಬ ಅರ್ಥವನ್ನು ಸರಳವಾಗಿ ಮಾಡಬಹುದು.

ವರ್ತಮಾನಕಾಲದ ಕ್ರಿಯಾಪದಕ್ಕೆ 'स्म' ಎಂಬ ಅವ್ಯಯವನ್ನು ಸೇರಿಸಿದರೆ ಭೂತಕಾಲದ ಅರ್ಥ ಬರುತ್ತದೆ. ಉದಾ: तस्मिन् वने शशकः प्रतिवसति स्म। ಆ ವನದಲ್ಲಿ ಮೊಲವು ವಾಸಿಸುತ್ತಿತ್ತು. (ತಾತ್ಕಾಲಿಕ ಭೂತಕಾಲಾರ್ಥವೂ ಇದೆ.)

## 2) लङ् (ಅನದ್ಯತನ ಭೂತಕಾಲ) IMPERFECT

ಈಗಾಗಲೇ ನೋಡಿದಂತೆ ಭೂತಕಾಲವನ್ನು 3 ವಿಧವಾಗಿ ವಿಭಾಗಿಸಿದ್ದುಂಟು. 1) लङ् (ಅನದ್ಯತನ) 2) लिट् (ಪರೋಕ್ಷ)ಮತ್ತು 3) लुङ् (ತೃತೀಯ ಅಥವಾ ಸಾಮಾನ್ಯ). 'ಅನದ್ಯತನ' ಎಂಬ ಹೆಸರೇ ಸೂಚಿಸುವಂತೆ ಇವತ್ತಿನದಲ್ಲದ ಆದರೆ ಸಮೀಪದ ಅಂದರೆ ನಿನ್ನೆಯದಷ್ಟು ಹತ್ತಿರದ ಭೂತಕಾಲದಲ್ಲಿ ನಡೆದಿರುವ ಕ್ರಿಯೆಯನ್ನು ಸೂಚಿಸಲು ಅನದ್ಯತನ ಭೂತಕಾಲದ ಕ್ರಿಯಾಪದವನ್ನು ಬಳಸಲಾಗುವದು. ಉದಾ: रामः ह्यः ग्रामम् अगच्छत्। (ರಾಮನು ನಿನ್ನೆ ಹಳ್ಳಿಗೆ ಹೋದನು). ಧಾತುವಿನ ಹಿಂದೆ 'अ' ಸೇರಿಸಿ, ಧಾತುವಿಗೆ ವಿಕರಣವನ್ನು ಹಚ್ಚಿ लङ् ಲಕಾರದ ಆಖ್ಯಾತ ಪ್ರತ್ಯಯ ಸೇರಿಸಿದಾಗ ಅನದ್ಯತನ ಭೂತಕಾಲದ ರೂಪವಾಗುತ್ತದೆ. अ + वस्+अ + त् = अवसत् (ವಾಸಿಸಿದನು).

ಬಹಳ ಹಿಂದಿನ ಘಟನೆಯನ್ನು ಹೇಳುವಾಗ ಪರೋಕ್ಷಭೂತಕಾಲದ (लिट्) ಕ್ರಿಯಾಪದವನ್ನೂ, ಇವತ್ತು ನಡೆದ ಸಂಗತಿಯನ್ನು ಹೇಳುವಾಗ ಅಥವಾ ನಡೆದ ಘಟನೆಯ ಕಾಲವು ಅನಿಶ್ಚಿತವಿರುವಾಗ (लुङ्) ಅಥವಾ ಸಾಮಾನ್ಯಭೂತಕಾಲದ ಕ್ರಿಯಾಪದವನ್ನು ಬಳಸುವ ನಿಯಮವಿದೆ. ಆದರೆ ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುವದು ಕಂಡು ಬರುವದಿಲ್ಲ. लुङ् ಲಕಾರದ ಬದಲಾಗಿ लङ् ಲಕಾರವನ್ನೇ ಬಳಸುವ ರೂಢಿಯು ಪ್ರಚಲಿತವಾಗಿದೆ.

## 3) लोट् (ಆಜ್ಞಾರ್ಥ) IMPERATIVE

ಸಾಮಾನ್ಯವಾಗಿ ಆಜ್ಞೆ(ಅಪ್ಪಣೆ) ಮಾಡುವಾಗ लोट् ಲಕಾರವನ್ನು ಬಳಸುತ್ತಾರೆ. ಉದಾ : सत्यं वद (ಸತ್ಯವನ್ನು ನುಡಿ). ಪ್ರಾರ್ಥನೆ, ನಿಮಂತ್ರಣ, ಇಚ್ಛೆ ಅಥವಾ ಆಶೀರ್ವಾದವನ್ನು ಸೂಚಿಸುವಾಗಲೂ लोट् ಕ್ರಿಯಾಪದವನ್ನು ಬಳಸಲಾಗುವದು. ಧಾತು + ವಿಕರಣ + लोट् ಲಕಾರದ ಆಖ್ಯಾತ ಪ್ರತ್ಯಯ = ಆಜ್ಞಾರ್ಥಕ್ರಿಯಾಪದ. ಉದಾ : आसने उपविशन्तु। (उपविश् +अ + अन्तु) (ಆಸನದ ಮೇಲೆ ಕುಳ್ಳರಿಸಬೇಕಾಗಿ ವಿನಂತಿ), अहं शरणं करवाणि (ನಾನು ಶರಣುಹೋಗಬಯಸುತ್ತೇನೆ), जनाः सुखिनो भवन्तु (ಜನರೆಲ್ಲರೂ ಸುಖವಾಗಿರಲಿ).

## 4) विधिलिङ् (ವಿಧ್ಯರ್ಥಕ) POTENTIAL

ಹೀಗೆ ಮಾಡಬೇಕು ಎಂದು ವಿಧಾನ ಮಾಡುವಾಗ विधिलिङ् ಕ್ರಿಯಾಪದವನ್ನು ಬಳಸಬೇಕು. ಉದಾ : अहरहः सन्ध्यां उपासीत (ನಿತ್ಯವೂ ಸಂಧ್ಯಾವಂದನೆಯನ್ನು

ಮಾಡಬೇಕು.) ಸಾಮರ್ಥ್ಯ ಮತ್ತು ಇಚ್ಛೆಯನ್ನು ಸೂಚಿಸುವಾಗಲೂ, ಒಂದು ವೇಳೆ ಹೀಗಿದ್ದರೆ ಹೀಗಾದೀತು (यद्यर्थे) ಎಂಬ ಅರ್ಥದಲ್ಲಿಯೂ विधिलिङ् ಕ್ರಿಯಾಪದಗಳನ್ನು ಬಳಸಬಹುದು. ಉದಾ : तैलात् रक्षेत् पुस्तकम् (ಪುಸ್ತಕವನ್ನು ಯಣ್ಣೆಯ ದೆಸೆಯಿಂದ ರಕ್ಷಿಸಬೇಕು.) यदि सः प्रत्यभिज्ञानमन्थरो भवेत् (ಒಂದು ವೇಳೆ ಅವನು ಗುರುತಿಸುವದರಲ್ಲಿ ತಡಮಾಡಿದರೆ...)

## 5) लिट् (ಪರೋಕ್ಷ ಭೂತಕಾಲ) PERFECT

अक्ष्णोः परं परोक्षं ಅಂದರೆ ಯಾರ ಕಣ್ಣಿಗೆ ಕಂಡಿರದಷ್ಟು ಹಿಂದಿನ ಸಂಗತಿ ಹೇಳುವಾಗ ಅಥವಾ ಪ್ರಾಚೀನಕಾಲದಲ್ಲಿ ನಡೆದುಹೋದ ಘಟನೆಯನ್ನು ನಿರೂಪಿಸುವಾಗ लिट् ಕ್ರಿಯಾಪದವನ್ನು ಬಳಸಲಾಗುತ್ತದೆ. ಉದಾ : कृष्णः कंसं जघान (ಕೃಷ್ಣನು ಕಂಸನನ್ನು ಕೊಂದನು.)

ಆರ್ಧಧಾತುಕ ಲಕಾರಗಳಲ್ಲಿ ಧಾತುಗಳಿಗೆ ಆಖ್ಯಾತಪ್ರತ್ಯಯ ಹಚ್ಚುವದಕ್ಕಿಂತ ಪೂರ್ವದಲ್ಲಿ ವಿಕರಣ ಪ್ರತ್ಯಯ ಹತ್ತುವದಿಲ್ಲವೆಂಬುದನ್ನು ಹಿಂದೆ ಸೂಚಿಸಲಾಗಿದೆ. ಆದರೆ ವಿಕರಣದ ಬದಲಾಗಿ ಪ್ರತ್ಯಯವು य ಬಿಟ್ಟು ಬೇರೇ ವ್ಯಂಜನದಿಂದ ಆರಂಭವಾಗಿದ್ದರೆ ಅದರ ಹಿಂದೆ इ (इट्) ಆಗಮವಾಗುವದು. [मित्रवदागमः, शत्रुवदादेशः ವಿವರಣೆಗೆ ಸಂಧಿಪ್ರಕರಣ ನೋಡಿ.] ಎಲ್ಲ ಧಾತುಗಳ ಪ್ರತ್ಯಯದ ಹಿಂದೆ 'इ' ಆಗಮವಾಗುವದಿಲ್ಲ. ಆದ್ದರಿಂದ इडागमವಾಗುವ ಧಾತುಗಳಿಗೆ 'सेट्' ಎಂದು 'इ' ಆಗಮವಾಗದ ಧಾತುಗಳಿಗೆ 'अनिट्' ಎಂದು 'इ' ಆಗಮವು ವಿಕಲ್ಪದಿಂದಾಗುವ ಅಥವಾ (ಅರ್ಥದಲ್ಲಿ) ಧಾತುಗಳಿಗೆ 'वेट्' ಎಂದು ಹೆಸರಿದೆ. ಹೀಗೆ ಧಾತುಗಳಲ್ಲಿ ಮೂರು ವರ್ಗಗಳನ್ನು ಮಾಡಿ, 'सेट्' ಧಾತುಗಳಿಗೆ 'इ' (इट्) ಆಗಮ ಹಚ್ಚಿ, 'अनिट्' ಧಾತುಗಳಿಗೆ इडागमವಿಲ್ಲದೆ ಮತ್ತು वेट् ಧಾತುಗಳಿಗೆ इडागमವನ್ನು ವಿಕಲ್ಪದಿಂದ ಮಾಡಿಸಿ ಆಖ್ಯಾತಪ್ರತ್ಯಯಗಳನ್ನು ಹಚ್ಚಬೇಕು. ಉದಾ : लिट् ಲಕಾರ (ಪರೋಕ್ಷಭೂತಕಾಲ)ದ ಉತ್ತಮ ಪುರುಷದ ದ್ವಿವಚನ ಅಥವಾ ಬಹುವಚನದ ಪ್ರತ್ಯಯಗಳು व ಮತ್ತು म ಎಂದಿವೆ. य ಪ್ರಾರಂಭದಲ್ಲಿಲ್ಲದ್ದರಿಂದ ಧಾತುವಿಗೆ 'इ' ಸೇರಿಸಬೇಕು. ( लिट् ಲಕಾರದಲ್ಲಿ ಧಾತುವಿನ ಮೊದಲ ಅಕ್ಷರವನ್ನು ಸಾಮಾನ್ಯವಾಗಿ ದ್ವಿತ್ವ ಮಾಡಬೇಕು.) ದ್ವಿತ್ವದ ನಿಯಮವನ್ನು ಪು.105 ನೋಡಿ.

रक्ष् - (सेट्) ररक्ष्+इ+व = ररक्षिव ब.व. ररक्षिम

कृ - (अनिट्) ककृ → चकृ+व = चकृव ब.व. चकृम

मुह् - (वेट्) मुमुह्+इ+व = मुमुहिव ब.व. मुमुहिम

मुमुह्+व = मुमुह्व ब.व. मुमुह्म

## 6) लुङ् (ಸಾಮಾನ್ಯ ಅಥವಾ ತೃತೀಯ ಭೂತಕಾಲ) AORIST

ನಡೆದ ಸಂಗತಿಯ ಕಾಲವು ಅನಿರ್ದಿಷ್ಟವಾಗಿರುವಾಗ ಅಥವಾ ಘಟನೆಯು ಇವತ್ತು (अद्यतन) ನಡೆದಿದ್ದರೆ लुङ् ಕ್ರಿಯಾಪದದಿಂದ ಅದನ್ನು ಹೇಳಬಹುದು. ಉದಾ : अद्य

प्रातः ग्रामं अगमम्। ಇಂದು ಬೆಳಿಗ್ಗೆ ಹಳ್ಳಿಗೆ ಹೋಗಿದ್ದೆನು. ಧಾತುವಿನ ಹಿಂದೆ अ ಸೇರಿಸಿ ಧಾತುವಿಗೆ लुङ् ಲಕಾರದ ಪ್ರತ್ಯಯ ಸೇರಿಸಬೇಕು. अ+गम्+अम्=अगमम्। ಆದರೆ ಸಾಮಾನ್ಯವಾಗಿ लुङ् ಲಕಾರದ ಬದಲಾಗಿ लङ् ಲಕಾರವನ್ನೇ ಹೆಚ್ಚು ಬಳಸುವದು ಈಗ ರೂಢಿಯಲ್ಲಿದೆ.

### 7) लुट् (ಪ್ರಥಮ ಭವಿಷ್ಯತ್‌ಕಾಲ) FIRST FUTURE

ಇವತ್ತಿನದಲ್ಲದ (ಅನದ್ಯತನ) ನಾಳೆ ಅಥವಾ ನಂತರದ ಭವಿಷ್ಯತ್‌ಕಾಲದಲ್ಲಿ ನಡೆಯುವ ಸಂಗತಿಯನ್ನು ಹೇಳುವಾಗ ಈ ಕ್ರಿಯಾಪದವನ್ನು ಬಳಸಲಾಗುವದು. ಉದಾ: अचिराद् वयमेव तत्र गन्तारः। (ಬೇಗನೇ ನಾವೇ ಅಲ್ಲಿಗೆ ಹೋಗುವವರಿದ್ದೇವೆ.) लुट् ಲಕಾರದ ಬಳಕೆಯಲ್ಲಿಯೂ ಧಾತುವು सेट् ಇದ್ದರೆ इंडागम, अनिट् ಇದ್ದರೆ 'इ' ಇಲ್ಲ, वेट् ಇದ್ದರೆ इंडागम ವಿಕಲ್ಪವಾಗಿಟ್ಟು ಆಖ್ಯಾತ ಪ್ರತ್ಯಯ ಸೇರಿಸಬೇಕು. ಉದಾ: पठ्(सेट्)+इ+ता=पठिता, क+अनिट्+ता=कर्ता।

### 8) लृट् (ಸಾಮಾನ್ಯ ಅಥವಾ ದ್ವಿತೀಯ ಭವಿಷ್ಯತ್‌ಕಾಲ) SECOND FUTURE

ಮುಂದೆ ನಡೆಯುವ ಘಟನೆಯನ್ನು ಹೇಳುವಾಗ, ಸಾಮಾನ್ಯವಾಗಿ लृट् ಕ್ರಿಯಾಪದಗಳನ್ನು ಬಳಸಲಾಗುತ್ತದೆ. ಉದಾ: अद्यैव आगमिष्यति (ಇಂದೇ ಬರುವನು). ಇಲ್ಲಿಯೂ सेट्, अनिट् ಮತ್ತು वेट् ಧಾತುಗಳಿಗೆ ಹಿಂದಿನಂತೆ इडागम ದ ನಿಯಮ ಅನ್ವಯಿಸುವದು. गम् +इ +स्यति=गमिष्यति, शक् (अनिट्) स्यति=शक्ष्यति (ಶಕ್ತನಾಗುವನು) ಇತ್ಯಾದಿ.

### 9) आशीर्लिङ् (ಆಶೀರರ್ಥ) BENEDICTIVE

ಆಶೀರ್ವಾದವನ್ನು ಹೇಳುವಾಗ आशीर्लिङ् ಕ್ರಿಯಾಪದಗಳನ್ನು ಬಳಸುತ್ತಾರೆ. ಉದಾ : शुभं भूयात् (ಶುಭವಾಗಲಿ). ಇಲ್ಲಿ ಧಾತು ಪರಸ್ಮೈಪದಿಯಲ್ಲಿ ಇದ್ದರೆ ಅದರ ಕರ್ಮಣಿ ಅಂಗದಲ್ಲಿಯ य ಪ್ರತ್ಯಯವನ್ನು ಬಿಟ್ಟು, आशीर्लिङ् ಪ್ರತ್ಯಯಗಳನ್ನು ಸೇರಿಸಿದಾಗ ಆಶೀರರ್ಥದ ಕ್ರಿಯಾಪದ ಬರುತ್ತದೆ. भू (यो)+यात्=भूयात् ಧಾತು ಆತ್ಮನೇಪದಿಯಾಗಿದ್ದರೆ सेट्, अनिट् ಮತ್ತು वेट् ಧಾತುಗಳಿಗೆ इडागम ದ ನಿಯಮ ಇಲ್ಲಿಯೂ ಅನ್ವಯ ಮಾಡಿ आशीर्लिङ्ದ ಆತ್ಮನೇಪದ ಪ್ರತ್ಯಯಗಳನ್ನು ಸೇರಿಸಬೇಕು. ಉದಾ : कृ (अनिट्)+सीष्ट=कृषीष्ट।

### 10) लृङ् (ಸಂಕೇತಾರ್ಥ) CONDITIONAL

ಒಂದು ಕ್ರಿಯೆಯ ಸ್ಥಿತಿಯು ಒಂದು ನಿಬಂಧನೆ ಅಥವಾ ಇನ್ನೊಂದು ಕ್ರಿಯೆಯನ್ನು ಅವಲಂಬಿಸಿದ್ದು ಆ ಇನ್ನೊಂದು ಕ್ರಿಯೆಯು ಅಥವಾ ನಿಬಂಧನೆಯು ಪೂರ್ಣವಾಗದಿರುವಾ

ಮೊದಲಿನ ಕ್ರಿಯೆಯು ಸಂಭವಿಸಲಿಲ್ಲವೆಂದು ಹೇಳುವಾಗ ಲೃಙ್ ಕ್ರಿಯಾಪದವನ್ನು ಬಳಸುತ್ತಾರೆ. ಉದಾ : सुवृष्टिश्चेत् अभविष्यत् तदा क्षेत्रं सुभिक्षं अकरिष्यत्। (ಒಂದು ವೇಳೆ ಮಳೆಯಾಗಿದ್ದಿದ್ದರೆ ಹೊಲವನ್ನು ಬೆಳೆ ತುಂಬಿರುವಂತೆ ಮಾಡಿರುತ್ತಿದ್ದನು. ಅಂದರೆ ಹೊಲವು ಲೇಸಾದ ಪೈರಿನಿಂದ ತುಂಬಿ ಬರುವ ಕ್ರಿಯೆಯು ಮಳೆಯ ಬರುವಿಕೆಯನ್ನವಲಂಬಿಸಿದೆ.)

ಧಾತುವಿನ ಹಿಂದೆ 'अ' ಹಚ್ಚಿ, सेट्, अनिट् ಮತ್ತು वेट् ನಿಯಮಗಳನ್ನು ಅನ್ವಯಿಸಿ ಮುಂದೆ ಸಂಕೇತಾರ್ಥದ ಪ್ರತ್ಯಯ ಸೇರಿಸಿ ಲೃಙ್ ಕ್ರಿಯಾಪದ ಪಡೆಯಬಹುದು.

अ+पठ् (सेट्)+इ+स्यत्=अपठिष्यत्
अ+शक् (अनिट्)+स्यत्=अशक्ष्यत्

## ಕಾಲಾರ್ಥಗಳ (ಆಖ್ಯಾತ) ಪ್ರತ್ಯಯಗಳು

ಸವಿಕರಣ ಕಾಲಾರ್ಥಗಳಲ್ಲಿ ಮತ್ತು ಅವಿಕರಣ ಕಾಲಾರ್ಥಗಳಲ್ಲಿ ಧಾತುಗಳಿಗೆ ಸೇರುವ ಆಖ್ಯಾತ ಪ್ರತ್ಯಯಗಳು ಬೇರೆ ಬೇರೆಯಾಗಿವೆ. ಸವಿಕರಣ (ಸಾರ್ವಧಾತುಕ) ಕಾಲಾರ್ಥಗಳಲ್ಲಿಯೂ ಕೂಡ 'ಅಂಗ'ದ 'अ' ಕೊನೆಗೆ ಬರುವಂತಹ 1, 4, 6 ಮತ್ತು 10 ನೆಯ ಗಣಗಳ ಧಾತುಗಳ ಆಖ್ಯಾತ ಪ್ರತ್ಯಯಗಳು ಬೇರೆ ಮತ್ತು ಅಂಗದ ಕೊನೆಗೆ 'अ' ಬರದಿರುವ 2, 3, 5, 7, 8 ಮತ್ತು 9 ಗಣಗಳ ಧಾತುಗಳಿಗೆ ಹಚ್ಚುವ ಆಖ್ಯಾತ ಪ್ರತ್ಯಯಗಳು ಭಿನ್ನವಾಗಿಯೇ ಇವೆ. म् ಮತ್ತು व् ಗಳಿಂದ ಪ್ರಾರಂಭವಾಗುವ ಆಖ್ಯಾತ ಪ್ರತ್ಯಯಗಳ ಹಿಂದಿನ 'ಅಂಗ'ಗಳ अ ಕಾರವು ದೀರ್ಘವಾಗಿ 'आ' ಆಗುತ್ತದೆ. लिख्+आ+मि=लिखामि। अ ದಿಂದ ಪ್ರಾರಂಭಿಸುವ ಆಖ್ಯಾತ ಪ್ರತ್ಯಯಗಳ ಹಿಂದಿನ 'ಅಂಗ'ಗಳ अ ಕಾರವು ಲೋಪವಾಗುತ್ತದೆ. लिख्+अ+अन्ति =लिखन्ति ಇತ್ಯಾದಿ.

I. 1, 4, 6 ಮತ್ತು 10 ನೆಯ ಗಣಗಳ ಧಾತುಗಳಿಗೆ ಹಚ್ಚುವ ಸವಿಕರಣ ಕಾಲಾರ್ಥಗಳ ಆಖ್ಯಾತ ಪ್ರತ್ಯಯಗಳು ಹೀಗಿವೆ -

### 1) ಲಟ್ (ವರ್ತಮಾನಕಾಲ)

| | ಪರಸ್ಮೈಪದ | | | | ಆತ್ಮನೇಪದ | | |
|---|---|---|---|---|---|---|---|
| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
| ಪ.ಪು. | ति | तः[1] | अन्ति | ಪ.ಪು. | ते | इते | अन्ते |
| ಮ.ಪು. | सि | थः | थ | ಮ.ಪು. | से | इथे | ध्वे |
| ಉ.ಪು. | मि | वः | मः | ಉ.ಪು. | इ | वहे | महे |

[ಈ ಆಖ್ಯಾತ ಪ್ರತ್ಯಯಗಳಲ್ಲಿ ವಿಸರ್ಗವಿದ್ದಲ್ಲಿ स् ಇದೆ. ಅಂದರೆ स् ಇದ್ದಲ್ಲಿ ವಿಸರ್ಗ ಬರುತ್ತದೆ]

### 2) लङ् (ಅನದ್ಯತನ ಭೂತಕಾಲ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ.ಪು. | त् | ताम् | अन् | ಪ.ಪು. | त | इताम् | अन्त |
| ಮ.ಪು. | स् | तम् | त | ಮ.ಪು. | थाः | इथाम् | ध्वम् |
| ಉ.ಪು. | अम् | व | म | ಉ.ಪು. | इ | वहि | महि |

### 3) लोट् (ಆಜ್ಞಾರ್ಥ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ.ಪು. | तु * | ताम् | अन्तु | ಪ.ಪು. | ताम् | इताम् | अन्ताम् |
| ಮ.ಪು. | - | तम् | त | ಮ.ಪು. | स्व | इथाम् | ध्वम् |
| ಉ.ಪು. | आनि | आव | आम | ಉ.ಪು. | ऐ | आवहै | आमहै |

* [ಕೆಲವು ಸಲ तात् ಎಂಬ ಪ್ರತ್ಯಯವು ಪ್ರ.ಪು. ಮತ್ತು ಮ.ಪು. ಏಕವಚನದಲ್ಲಿ ವಿಕಲ್ಪವಾಗಿ ಸೇರುತ್ತದೆ. ಆಗ ಅದು ಸಾಮಾನ್ಯವಾಗಿ ಆಶೀರ್ವಾದಾರ್ಥವನ್ನು ಸೂಚಿಸುತ್ತದೆ. ಉದಾ : भवतु, भवतात् ; भव, भवतात्। ]

### 4) विधिलिङ् (ವಿಧ್ಯರ್ಥ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ.ಪು. | ईत् | ईताम् | ईयुः | ಪ.ಪು. | ताम् | इताम् | अन्ताम् |
| ಮ.ಪು. | ईः | ईतम् | ईत | ಮ.ಪು. | स्व | इथाम् | ध्वम् |
| ಉ.ಪು. | ईयम् | ईव | ईम | ಉ.ಪು. | ऐ | आवहै | आमहै |

**II.** 2, 3, 5, 7, 8 ಮತ್ತು 9 ಗಣಗಳ ಧಾತುಗಳಿಗೆ ಸೇರುವ ಸವಿಕರಣ (ಸಾರ್ವಧಾತುಕ) ಕಾಲಾರ್ಥಗಳ ಆಖ್ಯಾತ ಪ್ರತ್ಯಯಗಳು ವರ್ತಮಾನ (ಲಟ್), ಅನದ್ಯತನ ಭೂತ (ಲಙ್) ಮತ್ತು (ಲೋಟ್) ಆಜ್ಞಾರ್ಥ ಇವುಗಳ ಪರಸ್ಮೈಪದಿಯಲ್ಲಿ ಮತ್ತು ವಿಧ್ಯರ್ಥದ ಆತ್ಮನೇಪದಿಯಲ್ಲಿ ಮೊದಲನೆಯ ಗುಂಪಿನ ಪ್ರತ್ಯಯಗಳೇ ಆಗಿರುತ್ತವೆ. (ಆದರೆ ಆಜ್ಞಾರ್ಥ ಮ.ಪು.ಏ.ವ ಮಾತ್ರ 'हि' ಎಂಬ ಪ್ರತ್ಯಯವಿದೆ. देहि (ಕೊಡು) जहि (ಕೊಲ್ಲು))

ಎರಡನೆಯ ಗುಂಪಿನ ಉಳಿದ ಪ್ರತ್ಯಯಗಳು ಹೀಗಿವೆ -

| 1) (ಲಟ್) ವರ್ತಮಾನಕಾಲ - ಆ.ಪದ. | | | | 2) (ಲಙ್) ಅನದ್ಯತನಭೂತಕಾಲ - ಆ.ಪದ | | | |
|---|---|---|---|---|---|---|---|
| ಪ.ಪು. | ते | आते | अते | ಪ.ಪು. | त | आताम् | अत |
| ಮ.ಪು. | से | आथे | ध्वे | ಮ.ಪು. | थाः | आथाम् | ध्वः |
| ಉ.ಪು. | ए | वहे | महे | ಉ.ಪು. | इ | वहि | महि |

| 3) (लोट्) ಆಜ್ಞಾರ್ಥ - ಆ.ಪದ. | | | | 4)(विधिलिङ्) ವಿಧ್ಯರ್ಥ - ಆ.ಪದ. | | | |
|---|---|---|---|---|---|---|---|
| ಪ್ರ.ಪು. | ताम् | आताम् | अताम् | ಪ್ರ.ಪು. | यात् | याताम् | युः |
| ಮ.ಪು. | स्व | आथाम् | ध्वः | ಮ.ಪು. | याः | यातम् | यात |
| ಉ.ಪು. | याम् | याव | याम | ಉ.ಪು. | याम् | याव | याम |

ಎರಡನೆಯ ಗುಂಪಿನ ಧಾತುಗಳಿಗೆ ಸೇರಿಸುವ ಪ್ರತ್ಯಯಗಳಲ್ಲಿ ಎರಡು ವಿಧ :1) ಸಬಲ (Strong) ಅಥವಾ पित् 2) ದುರ್ಬಲ (Weak) ಅಥವಾ अपित् ।.

लट् ಲಕಾರದ ति, सि, मि; लङ् ಲಕಾರದ त्, स्, अम्; लोट् ಲಕಾಲದ तु, आनि, आव, आम, ऐ, आवहै, आमहै ಇವು पित् ಅಥವಾ ಸಬಲ ಪ್ರತ್ಯಯಗಳು. ಈ ಪ್ರತ್ಯಯಗಳನ್ನು ಹಚ್ಚಿದಾಗ ಧಾತುಗಳ ಅಥವಾ ಅವುಗಳ ಅಂಗಗಳ ಅಂತ್ಯ ಅಥವಾ ಉಪಾಂತ್ಯ ಹ್ರಸ್ವಸ್ವರಗಳಿಗೆ ಗುಣ ಅಥವಾ ವೃದ್ಧಿಯಾಗುತ್ತದೆ. [ಗುಣ ಎಂದರೆ इ ई ಗಳು ए; उ ऊ ಗಳು ओ; ಮತ್ತು ऋ ॠ ಗಳು अर्; लृ ವು अल् ಆಗಿ ಬದಲಾಗುವದು. ವೃದ್ಧಿ ಎಂದರೆ अ ವು आ; इ ई ए ಗಳು ऐ; उ ऊ ओ ಗಳು औ; ऋ ॠ ಗಳು आर्; ಮತ್ತು लृ ವು आल् ಆಗಿ ಬದಲಾಗುವದು.] ಉದಾ: स्तु+ति=स्तौति; इ+तु=एतु; विद्+ति=वेत्ति; द्विष्+आम=द्वेषाम ।

2) ಇನ್ನುಳಿದ ಪ್ರತ್ಯಯಗಳು ದುರ್ಬಲ (अपित्). ಅವು ಸೇರುವಾಗ ಮೇಲೆ ತೋರಿಸಿದ ಬದಲಾವಣೆ ಇರುವದಿಲ್ಲ.

III. ಅವಿಕರಣ (ಆರ್ಧಧಾತುಕ) ಕಾಲಾರ್ಥಗಳ ಆಖ್ಯಾತ ಪ್ರತ್ಯಯಗಳು :

## 5) लिट् (ಪರೋಕ್ಷಭೂತಕಾಲ)

| | ಪರಸ್ಮೈಪದ | | | | ಆತ್ಮನೇಪದ | | |
|---|---|---|---|---|---|---|---|
| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
| ಪ್ರ.ಪು. | अ | अतुः | उः | ಪ್ರ.ಪು. | ए | आते | इरे |
| ಮ.ಪು. | थ | अथुः | अ | ಮ.ಪು. | से | आथे | ध्वे |
| ಉ.ಪು. | अ | व | म | ಉ.ಪು. | ए | वहे | महे |

## 6) लुङ् (ಸಾಮಾನ್ಯಭೂತಕಾಲ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ್ರ.ಪು. | त | ताम् | अन् (उः) | ಪ್ರ.ಪು. | त | इताम्/आताम् | अन्त/अत |
| ಮ.ಪು. | स | तम | त | ಮ.ಪು. | थाः | इथाम्/आथाम् | ध्वम् |
| ಉ.ಪು. | अम् | व | म | ಉ.ಪು. | इ | वहि | महि |

## 7) लुट् (ಪ್ರಥಮ ಭವಿಷ್ಯತ್‌ಕಾಲ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ್ರ.ಪು. | ता | तारौ | तारः | ಪ್ರ.ಪು. | ता | तारौ | तारः |
| ಮ.ಪು. | तासि | तास्थः | तास्थ | ಮ.ಪು. | तासे | तासाथे | ताध्वे |
| ಉ.ಪು. | तास्मि | तास्वः | तास्मः | ಉ.ಪು. | ताहे | तास्वहे | तास्महे |

## 8) लृट् (ದ್ವಿತೀಯ ಭವಿಷ್ಯತ್‌ಕಾಲ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ್ರ.ಪು. | स्यति | स्यतः | स्यन्ति | ಪ್ರ.ಪು. | स्यते | स्येते | स्यन्ते |
| ಮ.ಪು. | स्यसि | स्यथः | स्यथ | ಮ.ಪು. | स्यसे | स्येथे | स्यध्वे |
| ಉ.ಪು. | स्यामि | स्यावः | स्यामः | ಉ.ಪು. | स्ये | स्यावहे | स्यामहे |

## 9) आशीर्लिङ् (ಆಶೀರ್ವಾದಾರ್ಥ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ್ರ.ಪು. | यात् | यास्ताम् | यासुः | ಪ್ರ.ಪು. | सीष्ट | सीयास्ताम् | सीरन् |
| ಮ.ಪು. | याः | यास्तम् | यास्त | ಮ.ಪು. | सीष्ठाः | सीयास्थाम् | सीध्वम् |
| ಉ.ಪು. | यासम् | यास्व | यास्म | ಉ.ಪು. | सीय | सीवहि | सीमहि |

## 10) लृङ् (ಸಂಕೇತಾರ್ಥ)

| | ಏ.ವ. | ದ್ವಿ.ವ. | ಬ.ವ. | | ಏ.ವ. | ದ್ವಿ.ವ. | ಬ.ವ. |
|---|---|---|---|---|---|---|---|
| ಪ್ರ.ಪು. | स्यत् | स्यताम् | स्यन् | ಪ್ರ.ಪು. | स्यत | स्येताम् | स्यन्त |
| ಮ.ಪು. | स्यः | स्यतम् | स्यत | ಮ.ಪು. | स्यथाः | स्येथाम् | स्यध्वम् |
| ಉ.ಪು. | स्यम् | स्याव | स्याम | ಉ.ಪು. | स्ये | स्यावहि | स्यामहि |

**ಆಖ್ಯಾತಪ್ರತ್ಯಯಗಳನ್ನು ಹಚ್ಚುವಾಗ ಆವಶ್ಯಕವಾದ ನಿಯಮಗಳು**

ಧಾತು+ವಿಕರಣ+ಆಖ್ಯಾತಪ್ರತ್ಯಯ=ಕ್ರಿಯಾಪದ ಇದನ್ನು ನೆನಪಿಡಬೇಕು.

1) ಧಾತುವಿಗೆ ವಿಕರಣವನ್ನು ಹಚ್ಚುವಾಗ, 2) ಧಾತುವಿಗೆ ಅಥವಾ ಧಾತುವಿಗೆ ವಿಕರಣ ಹಚ್ಚಿದಾಗ ತಯಾರಾದ 'ಅಂಗ'ಕ್ಕೆ ಆಖ್ಯಾತಪ್ರತ್ಯಯಗಳನ್ನು ಹಚ್ಚುವಾಗಲೂ ಆಯಾ ಗಣಕ್ಕೆ ಮತ್ತು ಆಯಾ ಲಕಾರಕ್ಕೆ ನಿರ್ದಿಷ್ಟಪಡಿಸಿದ ನಿಯಮಗಳನ್ನು ಅನುಸರಿಸಬೇಕು. ಆಯಾ ಗಣಗಳಿಗೆ ಸಂಬಂಧಪಟ್ಟ ಕೆಲವು ಪ್ರಮುಖ ನಿಯಮಗಳನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ.

1) 1ನೇ ಗಣದ ಧಾತುಗಳಿಗೆ अ ವಿಕರಣ ಹಚ್ಚುವಾಗ ಧಾತುಗಳ ಉಪಾಂತ್ಯ ಹ್ರಸ್ವ ಅಥವಾ ಕೊನೆಯ ದೀರ್ಘ ಗುಣವಾಗುತ್ತದೆ. ಉದಾ: भू-ಧಾತುವಿಗೆ अ ವಿಕರಣ ಸೇರುವಾಗ

ಭೂದ ಕೊನೆಯ ಸ್ವರವಾದ ಊ ಗುಣವಾಗಿ ಓ ಆಗುತ್ತದೆ. ಅಂದರೆ भू+अ=भो+अ ಯಾಂತಾದೇಶ ವಾಂತಾದೇಶ ಸಂಧಿನಿಯಮದಂತೆ भव् ಆಗುತ್ತದೆ. भव्+अ=भव ಎಂಬ ಅಂಗವು ಸಿದ್ಧವಾಯಿತು. ಅದಕ್ಕೆ ति ಆಖ್ಯಾತ ಪ್ರತ್ಯಯ ಹಚ್ಚಿದಾಗ भवति ಕ್ರಿಯಾಪದ ತಯಾರಾಗುತ್ತದೆ.

2) ಎರಡನೆಯ ಗಣದ ಧಾತುಗಳಿಗೆ ವಿಕರಣ ಇಲ್ಲ. ಈ ಗಣದ ಕ್ರಿಯಾಪದಗಳು ಅನಿಯಮಿತ.

3) ಮೂರನೆಯ ಗಣದ ಧಾತುಗಳಿಗೆ ವಿಕರಣವಿಲ್ಲದಿದ್ದರೂ ಆಖ್ಯಾತ ಪ್ರತ್ಯಯ ಹಚ್ಚುವದಕ್ಕೂ ಮೊದಲು ಧಾತುಗಳು ದ್ವಿತ್ವವಾಗಿ "ಅಂಗ"ವೆಂದಾಗುತ್ತವೆ.

**ದ್ವಿತ್ವದ ಕೆಲವು ನಿಯಮಗಳು :**

i) ಧಾತುವು ಸ್ವರದಿಂದ ಪ್ರಾರಂಭವಾಗಿದ್ದರೆ ಆ ಸ್ವರವನ್ನಷ್ಟೇ ದ್ವಿತ್ವ ಮಾಡಬೇಕು. ಉದಾ:इष्, इइष्

ii) ಧಾತು ವ್ಯಂಜನದಿಂದ ಸುರು ಆಗಿದ್ದರೆ ಆ ವ್ಯಂಜನವನ್ನು ಅದರ ಸ್ವರ ಸಹಿತವಾಗಿ ದ್ವಿತ್ವ ಮಾಡಬೇಕು. ಉದಾ: बुध्-बुबुध्

iii) ಧಾತುವು ಸಂಯುಕ್ತ ವ್ಯಂಜನದಿಂದ ಆರಂಭವಾಗಿದ್ದರೆ ಮೊದಲಿನ ವ್ಯಂಜನವನ್ನು ಆ ಸಂಯುಕ್ತ ವ್ಯಂಜನದ ಸ್ವರಸಹಿತವಾಗಿ ದ್ವಿತ್ವ ಮಾಡಬೇಕು. ह्री- (ह्+र्+ई) ह्री ಹರೀ; ಆದರೆ ಧಾತುವಿನ ಪ್ರಾರಂಭದ ಸಂಯುಕ್ತ ವ್ಯಂಜನದ ಮೊದಲನೆಯ ವ್ಯಂಜನವು श्,ष्,स् ಇದ್ದು ಎರಡನೆಯ ವ್ಯಂಜನವು ಕರ್ಕಶ ವ್ಯಂಜನವಿದ್ದರೆ ಆ ಕಠೋರ ವ್ಯಂಜನ ಮತ್ತು ಸ್ವರ ಇವು ಕೂಡಿ ಆದ ಪೂರ್ಣಾಕ್ಷರವನ್ನು ದ್ವಿತ್ವ ಮಾಡಬೇಕು.-स्पर्ध्-पस्पर्ध

iv) ದ್ವಿತ್ವ ಮಾಡಿದ ಮೇಲೆ ಒಂದೇ ವಿಧವಾದ ಎರಡು ಅಕ್ಷರಗಳು ಬರುತ್ತವೆ. ಅವುಗಳಲ್ಲಿ ಮೊದಲನೆಯ ಅಕ್ಷರಕ್ಕೆ 'ಅಭ್ಯಾಸ'ವೆಂದು ಹೆಸರು. ಈ ಅಭ್ಯಾಸದಲ್ಲಿ ಮತ್ತೆ ಕೆಲವು ಬದಲಾವಣೆಗಳಾಗುವವು. 1) ಅಭ್ಯಾಸದಲ್ಲಿ ದೀರ್ಘಸ್ವರವಿದ್ದರೆ ಹ್ರಸ್ವವಾಗುವದು; ऋ ಇದ್ದರೆ अ ಆಗುವದು. दा-दादा-ददा(ति) 2) ಅಭ್ಯಾಸದಲ್ಲಿ 'ಕ'ವರ್ಗವಿದ್ದರೆ 'ಚ' ವರ್ಗವಾಗುವದು, ह् ಇದ್ದರೆ ज् ಆಗುವದು. कृ-कृकृ-ककृ-चकृ; हु-हुहु-जुहु।

3) ಅಭ್ಯಾಸದಲ್ಲಿ ವರ್ಗದ ಎರಡನೆಯ ವ್ಯಂಜನವಿದ್ದರೆ ಅದು ಒಂದನೇ ವ್ಯಂಜನ, ನಾಲ್ಕನೆಯ ದಿದ್ದರೆ ಮೂರನೆಯ ವ್ಯಂಜನವಾಗುತ್ತದೆ. खन्-खखन्-कखन्-चखन्; भी-भीभी-भिभी-बिभी।

4) ಮೂರನೆಯ ಗಣದ ಧಾತುಗಳಿಗೆ ಲಟ್ ಲಕಾರದ ಪ್ರ.ಪು.ಬ.ವ. ಪ್ರತ್ಯಯಗಳು ಸೇರುವಾಗ ಅವುಗಳ ಅನುಸ್ವಾರ (अन्ति, अन्ते)ವು ಲೋಪವಾಗುತ್ತದೆ. दा-ददति,ददते

(ಇನ್ನೂ ಅನೇಕ ಬದಲಾವಣೆಗಳಿದ್ದು ಪ್ರಮುಖವಾದವುಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.)

4) ನಾಲ್ಕನೆ ಗಣದ ವಿಕರಣವು य. ಇದನ್ನು ಧಾತುವಿಗೆ ಸೇರಿಸಿ ತಿಙ್ ಪ್ರತ್ಯಯವನ್ನು ಹಚ್ಚಬೇಕು. नृत्+य+ति=नृत्यति

5) 5ನೇ ಗಣದ ವಿಕರಣವು नु. ಈ ವಿಕರಣದ ಮುಂದೆ ಸಬಲ (पित्) ಆಖ್ಯಾತಪ್ರತ್ಯಯಗಳು ಬಂದರೆ नु ಗುಣವಾಗಿ नो ಆಗುತ್ತದೆ. चि+नु+मि=चिनोमि. ಆದರೆ (अपित्) ಪ್ರತ್ಯಯಗಳು ಬಂದರೆ चि+नु+थ=चिनुथ.

6) 6ನೇ ಗಣದ ವಿಕರಣವು अ. ಧಾತುವಿಗೆ ಇದನ್ನು ಹಚ್ಚಿ ಆಖ್ಯಾತಪ್ರತ್ಯಯ ಜೋಡಿಸಬೇಕು. (ಈ 'अ' ಹಚ್ಚುವಾಗ 1ನೇ ಗಣದಲ್ಲಿಯಂತೆ ಧಾತುವಿನ ಅಂತ್ಯ ಸ್ವರಕ್ಕೂ ಹಾಗೂ ಉಪಾಂತ್ಯ ಹ್ರಸ್ವ ಸ್ವರಕ್ಕೂ ಗುಣವಾಗುವದಿಲ್ಲ. ಇದೇ 1 ಮತ್ತು 6ನೇ ಗಣದ ವ್ಯತ್ಯಾಸ.)

7) 7 ನೇ ಗಣದ ವಿಕರಣ न. ಇದು ಧಾತುವಿನ ಕೊನೆಗೆ ಸೇರುವದಿಲ್ಲ, ಧಾತುವಿನ ಸ್ವರ ಮತ್ತು ಕೊನೆಯ ವ್ಯಂಜನಗಳ ನಡುವೆ ಸೇರುತ್ತದೆ ಮತ್ತು ದುರ್ಬಲ (अपित्) ಪ್ರತ್ಯಯ ಹಚ್ಚಿದಾಗ ಈ न → न् ಆಗುತ್ತದೆ: रुध् ಧಾತು - रु+न+ध्+मि (पित्) = रुणध्मि, रु+न्+ध्+अन्ति (अपित्) =रुन्धन्ति. i) ಆಜ್ಞಾರ್ಥ(लोट्) ಮ.ಪು.ಏ.ವ. ಆಖ್ಯಾತ ಪ್ರತ್ಯಯವು न ಹೋಗಿ धि ಆಗುತ್ತದೆ. छिद् ಧಾತು: छि+न् +द्+धि (अपित्) =छिन्धि.

8) 8ನೇ ಗಣದ ವಿಕರಣವು उ. ಇದರ ಮುಂದೆ ಸಬಲ (पित्) ಪ್ರತ್ಯಯ ಬಂದರೆ उ ಗುಣವಾಗಿ ओ ಆಗುತ್ತದೆ. तन्+उ+मि=तनोमि. (i) कृ ಧಾತು, ಸಬಲ ಪ್ರತ್ಯಯ ಬಂದಾಗ कर्, ಮತ್ತು ದುರ್ಬಲ ಪ್ರತ್ಯಯ ಸೇರಿದಾಗ कुर् ಆಗುತ್ತದೆ: करोमि, कुरुथ। व् ಮತ್ತು म् ದಿಂದ ಪ್ರಾರಂಭವಾದ ದುರ್ಬಲ ಪ್ರತ್ಯಯಗಳು ಬಂದಾಗ कृ ಧಾತುವಿಗೆ ಹಚ್ಚುವ उ ವಿಕರಣವು ಲೋಪವಾಗುತ್ತದೆ - कुर्वः कुर्मः

9) ना ಇದು 9 ನೇ ಗಣದ ವಿಕರಣ. (i) ತಿಙ್ ಪ್ರತ್ಯಯವು ದುರ್ಬಲ ಇದ್ದು ವ್ಯಂಜನದಿಂದ ಆರಂಭವಾಗಿದ್ದರೆ ना ವಿಕರಣವು नी ಆಗುತ್ತದೆ : मी+(ना) नी+ वः=मिनीवः (ii) ದುರ್ಬಲ ಆಖ್ಯಾತಪ್ರತ್ಯಯವು ಸ್ವರದಿಂದ ಆರಂಭವಾದರೆ ना ವು न् ಆಗುತ್ತದೆ. क्षुभ्+(ना) न्+अन्ति=क्षुभ्नन्ति

10) ಸಾಮಾನ್ಯವಾಗಿ 10ನೇ ಗಣದ ಧಾತುಗಳು ಉಭಯಪದಿಯಾಗಿರುತ್ತವೆ. ಧಾತುಗಳಿಗೆ ಈ ಗಣದ ವಿಕರಣವಾದ अय ಸೇರಿದಾಗ (गण, रच, कथ, वर, पत, स्तन, मह, कुण ಮುಂತಾದ ಕೆಲವು ಧಾತುಗಳನ್ನು ಬಿಟ್ಟು, ಉಳಿದ) ಧಾತುಗಳ ಉಪಾಂತ್ಯ अ ಸ್ವರವು ವೃದ್ಧಿ ಅಥವಾ ಗುಣವಾಗುತ್ತದೆ. तड्+अय+ति=ताडयति: चुर्+ अय+ति=चोरयति।

ಪ್ರತಿಯೊಂದು ಗಣದ ಒಂದೊಂದು ಧಾತುವಿನ ಹತ್ತೂ ಲಕಾರಗಳಲ್ಲಿ ಉಂಟಾಗುವ ಕ್ರಿಯಾಪದಗಳ ರೂಪಗಳನ್ನು ಮಾದರಿಗಾಗಿ ಇಲ್ಲಿ ಕೊಟ್ಟಿದೆ.

(ಹೆಚ್ಚು ಬಳಕೆಯಲ್ಲಿರುವ 1ನೇ ಗಣ (भ्वादि) ಈ ಗಣದ ಕೆಲವು ಧಾತುಗಳನ್ನು ಸುಲಭವಾಗಿ ನೆನೆದುಕೊಳ್ಳಲು ಈ ಕೆಳಗಿನ ಶ್ಲೋಕಗಳನ್ನು ಕಂಠಪಾಠ ಮಾಡಿ).

### 1ನೇ ಗಣ (भ्वादि) ವಿಕರಣ ಪ್ರತ್ಯಯ-अ

नमन् दशत्यर्जतक्षरक्ष क्रीडति खादति। पठेत्तर शपे शोचे नन्दक्षिप्तं फलं नय।।
दहन् खन लिखन् गायन् हसन् वहति शंसति।
जपन् वर्षति धावन्ति तिष्ठ जीवन् रटन् चरन्।।
मज्जन् जीवन्ति कीलन्ति भूषन् चूषति बुक्कति। निन्दजल्प नट क्रन्द वद चुम्ब यज क्षर।।। पच स्मर त्यजन् गायन् वादन् नर्दन् दिशन् सरन्। एधते याचते चेष्टे यते लेभे भजे घटे।।
ईक्षते शोभते मोदे स्पर्धते रमते क्षुभे। ऊहते वर्धते भासे कम्पते शङ्कते व्यथे ।।

### भू- (सत्तायां ಇರು, ಆಗು) ಪರಸ್ಮೈಪದಿ

| 1) लट् (ವರ್ತಮಾನಕಾಲ) | | | 2) लिट् (ಪರೋಕ್ಷಭೂತಕಾಲ) | | |
|---|---|---|---|---|---|
| भवति | भवतः | भवन्ति | बभूव | बभूवतुः | बभूवुः |
| भवसि | भवथः | भवथ | बभूविथ | बभूवथुः | बभूव |
| भवामि | भवावः | भवामः | बभूव | बभूविव | बभूविम |

| 3) लुट् (ಭವಿಷ್ಯತ್‌ಕಾಲ) | | | 4) लृट् (ಸಾಮಾನ್ಯ ಭವಿಷ್ಯತ್‌ಕಾಲ) | | |
|---|---|---|---|---|---|
| भविता | भवितारौ | भवितारः | भविष्यति | भविष्यतः | भविष्यन्ति |
| भवितासि | भवितास्थः | भवितास्थ | भविष्यसि | भविष्यथः | भविष्यथ |
| भवितास्मि | भवितास्वः | भवितास्मः | भविष्यामि | भविष्यावः | भविष्यामः |

| | | | ← 5) लोट् (ಆಜ್ಞಾರ್ಥ) |
|---|---|---|---|
| भवतु, भवतात् | भवताम् | भवन्तु | |
| भव, भवतात् | भवतम् | भवत | |
| भवानि | भवाव | भवाम | |

| 6) लङ् (ಅನದ್ಯತನ ಭೂತಕಾಲ) | | | 7) विधिलिङ् (ವಿಧ್ಯರ್ಥ) | | |
|---|---|---|---|---|---|
| अभवत् | अभवताम् | अभवन् | भवेत् | भवेताम् | भवेयुः |
| अभवः | अभवतम् | अभवत | भवेः | भवेतम् | भवेत |
| अभवम् | अभवाव | अभवाम | भवेयम् | भवेय | भवेम |

**8) आशीर्लिङ् (ಆಶೀರರ್ಥ)**

| | | |
|---|---|---|
| भूयात् | भूयास्ताम् | भूयासुः |
| भूयाः | भूयास्तम् | भूयास्त |
| भूयासं | भूयास्व | भूयास्म |

**9) लुङ् (ತೃತೀಯ ಭೂತಕಾಲ)**

| | | |
|---|---|---|
| अभूत् | अभूताम् | अभूवन् |
| अभूः | अभूतम् | अभूत |
| अभूवम् | अभूव | अभूम |

**10) लृङ् (ಸಂಕೇತಾರ್ಥ)** ←

| | | |
|---|---|---|
| अभविष्यत् | अभविष्यताम् | अभविष्यन् |
| अभविष्यः | अभविष्यतम् | अभविष्यत |
| अभविष्यं | अभविष्याव | अभविष्याम |

**(षह) सह्-मर्षणे=ಸಹಿಸು - ಆತ್ಮನೇಪದಿ**

**1) लट् (ವರ್ತಮಾನಕಾಲ)**

| | | |
|---|---|---|
| सहते | सहेते | सहन्ते |
| सहसे | सहेथे | सहध्वे |
| सहे | सहावहे | सहामहे |

**2) लिट् (ಪರೋಕ್ಷಭೂತಕಾಲ)**

| | | |
|---|---|---|
| सेहे | सेहाते | सेहिरे |
| सेहिषे | सेहाथे | सेहिध्वे |
| सेहे | सेहावहे | सेहामहे |

**3) लुट् (ಪ್ರಥಮಭವಿಷ್ಯತ್‌ಕಾಲ)**

| | | |
|---|---|---|
| सहिता | सहितारौ | सहितारः |
| सहितासे | सहितासाथे | सहिताध्वे |
| सहिताहे | सहितास्वहे | सहितास्महे |

**4) लृट् (ಸಾಮಾನ್ಯ ಭವಿಷ್ಯತ್‌ಕಾಲ)**

| | | |
|---|---|---|
| सहिष्यते | सहिष्येते | सहिष्यन्ते |
| सहिष्यसे | सहिष्येथे | सहिष्यध्वे |
| सहिष्ये | सहिष्यावहे | सहिष्यामहे |

**5) लोट् (ಆಜ್ಞಾರ್ಥ)**

| | | |
|---|---|---|
| सहतां | सहेतां | सहन्ताम् |
| सहस्व | सहेथां | सहध्वं |
| सहे | सहावहे | सहामहे |

**6) लङ् (ಸಾಮಾನ್ಯ ಭೂತಕಾಲ)**

| | | |
|---|---|---|
| असहत | असहेताम् | असहन्त |
| असहथाः | असहेथां | असहध्वं |
| असहे | असहावहि | असहामहि |

**7) विधिलिङ् (ವಿಧ್ಯರ್ಥ)** →

| | | |
|---|---|---|
| सहेत | सहेयाताम् | सहेरन् |
| सहेथाः | सहेयाथाम् | सहेध्वम् |
| सहेय | सहेवहि | सहेमहि |

**8) आशीर्लिङ् (ಆಶೀರರ್ಥ)**

| | | |
|---|---|---|
| सहिषीष्ट | सहिषीयास्ताम् | सहिषीरन् |
| सहिषीष्ठाः | सहिषीयास्थाम् | सहिषीध्वं, सहिषीढ्वम् |
| सहिषीय | सहिषीवहि | सहिषीमहि |

| | | | |
|---|---|---|---|
| असहिष्ट | असहिषाताम् | असहिषत | ← 9) लुङ् (ತೃತೀಯ ಭೂತಕಾಲ) |
| असहिष्ठाः | असहिषाथां | असहिषध्वं | |
| असहिषि | असहिष्वहि | असहिष्महि | |

| | | | |
|---|---|---|---|
| 10) लृङ् (ಸಂಕೇತಾರ್ಥ) → | असहिष्यत | असहिष्येताम् | असहिष्यन्त |
| | असहिष्यथाः | असहिष्येथाम् | असहिष्यध्वम् |
| | असहिष्ये | असहिष्यावहि | असहिष्यामहि |

### 2ನೇ ಗಣ (अदादिगणः) ಇಲ್ಲಿ ವಿಕರಣ ಪ್ರತ್ಯಯವಿಲ್ಲ

स्वपित्यत्ति श्वसित्येति हन्तीष्टे द्यौति रोदिति।
अध्येत्यधीते जागर्ति दोग्धि चष्टेऽस्ति वेत्ति च
सूते शेते स्तौति लेढि शास्तिब्रूते चकास्ति च।
या वा भा स्नापि पालाख्या मा श्रा लाचेत्यदादयः॥

ಈ ಶ್ಲೋಕಗಳಲ್ಲಿ 2ನೇ ಗಣದ ಪ್ರಮುಖ ಧಾತುಗಳಿವೆ.

### हन = हिंसागत्योः = (ಹಿಂಸಿಸು) ಪರಸ್ಮೈಪದಿ

| 1) लट् (ವರ್ತಮಾನಕಾಲ) | | | 2) लिट् (ಪರೋಕ್ಷಭೂತಕಾಲ) | | |
|---|---|---|---|---|---|
| हन्ति | हतः | घ्नन्ति | जघान | जघ्नतुः | जघ्नुः |
| हंसि | हथः | हथ | जघनिथ, जघ्नथ | जघ्नथुः | जघ्न |
| हन्मि | हन्वः | हन्मः | जघान,जघन | जघ्निव | जघ्निम |

| 3) लुट् (ಭವಿಷ್ಯತ್‌ಕಾಲ) | | | 4) लृट् (ಸಾಮಾನ್ಯ ಭವಿಷ್ಯತ್‌ಕಾಲ) | | |
|---|---|---|---|---|---|
| हन्ता | हन्तारौ | हन्तारः | हनिष्यति | हनिष्यतः | हनिष्यन्ति |
| हन्तासि | हन्तास्थः | हन्तास्थ | हनिष्यसि | हनिष्यथः | हनिष्यथ |
| हन्तास्मि | हन्तास्वः | हन्तास्मः | हनिष्यामि | हनिष्यावः | हनिष्यामः |

| 5) लोट् (ಆಜ್ಞಾರ್ಥ) | | | 6) लङ् (ಸಾಮಾನ್ಯ ಭೂತಕಾಲ) | | |
|---|---|---|---|---|---|
| हन्तु,हतात् | हतां | घ्नन्तु | अहन् | अहतां | अघ्नन् |
| जहि,हतात् | हतं | हत | अहन् | अहतं | अहत |
| हनानि | हनाव | हनाम | अहनम् | अहन्व | अहन्म |

| 7) विधिलिङ् (ವಿಧ್ಯರ್ಥ) | | | 8) आशीर्लिङ् (ಆಶೀರರ್ಥ) | | |
|---|---|---|---|---|---|
| हन्यात् | हन्यातां | हन्युः | वध्यात् | वध्यास्तां | वध्यासुः |
| हन्याः | हन्यातं | हन्यात | वध्याः | वध्यास्तं | वध्यास्त |
| हन्यां | हन्याव | हन्याम | वध्यासं | वध्यास्व | वध्यास्म |

**9) लुङ् (ತೃತೀಯ ಭೂತಕಾಲ)**

| | | |
|---|---|---|
| अवधीत् | अवधिष्टां | अवधिषुः |
| अवधीः | अवधिष्टं | अवधिष्ट |
| अवधिषं | अवधिष्व | अवधिष्म |

**10) लृङ् (ಸಂಕೇತಾರ್ಥ)**

| | | |
|---|---|---|
| अहनिष्यत् | अहनिष्यताम् | अहनिष्यन् |
| अहनिष्यः | अहनिष्यतं | अहनिष्यत |
| अहनिष्यं | अहनिष्याव | अहनिष्याम |

**शीङ् = (स्वप्ने = ಮಲಗು) ಆತ್ಮನೇಪದಿ**

**1) लट् (ವರ್ತಮಾನಕಾಲ)**

| | | |
|---|---|---|
| शेते | शयाते | शेरते |
| शेषे | शयाथे | शेध्वे |
| शये | शेवहे | शेमहे |

**2) लिट् (ಪರೋಕ್ಷಭೂತಕಾಲ)**

| | | |
|---|---|---|
| शिश्ये | शिश्याते | शिश्यते |
| शिश्ये | शिश्याथे | शिध्वे |
| शिश्ये | शिश्यावहे | शिश्यामहे |

**3) लुट् (ಭವಿಷ್ಯತ್‌ಕಾಲ)**

| | | |
|---|---|---|
| शयिता | शयितारौ | शयितारः |
| शयितासे | शयितासाथे | शयिताध्वे |
| शयिताहे | शयितास्वहे | शयितास्महे |

**4) लृट् (ಸಾಮಾನ್ಯ ಭವಿಷ್ಯತ್‌ಕಾಲ)**

| | | |
|---|---|---|
| शयिष्यते | शयिष्येते | शयिष्यन्ते |
| शयिष्यसे | शयिष्येथे | शयिष्यध्वे |
| शयिष्ये | शयिष्यावहे | शयिष्यामहे |

**5) लोट् (ಆಜ್ಞಾರ್ಥ)**

| | | |
|---|---|---|
| शेतां | शयातां | शेरतां |
| शेष्व | शेयाथां | शेध्वं |
| शयै | शयावहै | शयामहै |

**6) लङ् (ಸಾಮಾನ್ಯ ಭೂತಕಾಲ)**

| | | |
|---|---|---|
| अशेत | अशयातां | अशेरत |
| अशेथाः | अशयाथां | अशेध्वं |
| अशयि | अशेवहि | अशेमहि |

**7) विधिलिङ् (ವಿಧ್ಯರ್ಥ)**

| | | |
|---|---|---|
| शयीत | शयीयातां | शयीरन् |
| शयीथाः | शयीयाथां | शयीध्वं |
| शयीय | शयीवहि | शयीमहि |

**8) आशीर्लिङ् (ಆಶೀರರ್ಥ)**

| | | |
|---|---|---|
| शयिषीष्ट | शयिषीयास्तां | शयिषीरन् |
| शयिषीष्ठाः | शयिषीयास्थां | शयिषीध्वम् |
| शयिषीय | शयिषीवहि | शयिषीमहि |

**← 9) लुङ् (ತೃತೀಯ ಭೂತಕಾಲ)**

| | | |
|---|---|---|
| अशयिष्ट | अशयिषातां | अशयिषत |
| अशयिष्ठाः | अशयिषाथां | अशयिध्वं, अशयिढ्वम् |
| अशयिषि | अशयिष्वहि | अशयिष्महि |

**10) लृङ् (ಸಂಕೇತಾರ್ಥ)→**

| | | |
|---|---|---|
| अशयिष्यत | अशयिष्येतां | अशयिष्यन्त |
| अशयिष्यथाः | अशयिष्येथां | अशयिष्यध्वं |
| अशयिष्ये | अशयिष्यावहि | अशयिष्यामहि |

## 3ನೇ ಗಣ (जुहोत्यादिगणः) ಇಲ್ಲಿ ದ್ವಿತ್ವವಿದೆ

ಈ ಗಣದ ಪ್ರಮುಖ ಧಾತುಗಳನ್ನು ಇಲ್ಲಿ ಸೂಚಿಸಲಾಗಿದೆ. ಕಂಠಪಾಠ ಮಾಡಿರಿ.

जुहोति होमे च बिभेत्यधर्मात् बिभर्ति वा यज्ञभुवं मीमीते।
दधाति धर्मं विजहाति पापं ददाति दत्ते वसु चापि धत्ते।।

### दा-दाने = (ಕೊಡುವದು) ಪರಸ್ಮೈಪದಿ

| 1) लट् (ವರ್ತಮಾನಕಾಲ) | | | 2) लिट् (ಪರೋಕ್ಷಭೂತಕಾಲ) | | |
|---|---|---|---|---|---|
| ददाति | दत्तः | ददति | ददौ | ददतुः | ददुः |
| ददासि | दत्थः | दत्थ | ददिथ, ददाथ | ददथुः | दद |
| ददामि | दद्वः | दद्मः | ददौ | ददिव | ददिम |

| 3) लुट् (ಭವಿಷ್ಯತ್‌ಕಾಲ) | | | 4) लृट् (ಸಾಮಾನ್ಯ ಭವಿಷ್ಯತ್‌ಕಾಲ) | | |
|---|---|---|---|---|---|
| दाता | दातारौ | दातारः | दास्यति | दास्यतः | दास्यन्ति |
| दातासि | दातास्थः | दातास्थ | दास्यसि | दास्यथः | दास्यथ |
| दातास्मि | दातास्वः | दातास्मः | दास्यामि | दास्यावः | दास्यामः |

| 5) लोट् (ಆಜ್ಞಾರ್ಥ) | | | 6) लङ् (ಸಾಮಾನ್ಯ ಭೂತಕಾಲ) | | |
|---|---|---|---|---|---|
| ददातु,दत्तात् | दत्तां | ददतु | अददात् | अदत्तां | अददुः |
| देहि,दत्तात् | दत्तं | दत्त | अददाः | अदत्तं | अदत्त |
| ददानि | ददाव | ददाम | अददां | अदद्व | अदद्म |

| 7) विधिलिङ् (ವಿಧ್ಯರ್ಥ) | | | 8) आशीर्लिङ् (ಆಶೀರರ್ಥ) | | |
|---|---|---|---|---|---|
| दद्यात् | दद्यातां | दद्युः | देयात् | देयास्तां | देयासुः |
| दद्याः | दद्यातं | दद्यात | देयाः | देयास्तं | देयास्त |
| दद्यां | दद्याव | दद्याम | देयासम् | देयास्व | देयास्म |

| 9) लुङ् (ತೃತೀಯ ಭೂತಕಾಲ) | | | 10) लृङ् (ಸಂಕೇತಾರ್ಥ) | | |
|---|---|---|---|---|---|
| अदात् | अदातां | अदुः | अदास्यत् | अदास्यतां | अदास्यन् |
| अदाः | अदातं | अदात | अदास्याः | अदास्यतं | अदास्यत |
| अदां | अदाव | अदाम | अदास्यं | अदास्याव | अदास्याम |

| ಕರ್ಮಣಿ ಭೂ.ಕೃ. | ಕರ್ಮಣಿ ವಿಧ್ಯರ್ಥ ಕೃದಂತ | ತುಮಂತಾವ್ಯಯ | ತ್ವಾಂತಾವ್ಯಯ |
|---|---|---|---|
| सृत | सार्य,सरणीय,सर्तव्य | सर्तुम् | सृत्वा |
| सृष्ट | सृज्य,सर्ज्य,सर्जनीय,स्रष्टव्य | स्रष्टुम् | सृष्ट्वा |
| सेवित | सेव्य,सेवनीय,सेवितव्य | सेवितुम् | सेवित्वा |
| स्तब्ध | स्तम्भ्य,स्तम्भनीय,स्तम्भितव्य | स्तम्भितुम् | स्तम्भित्वा,स्तब्ध्वा |
| स्तुत | स्तुत्य,स्तवनीय,स्तोतव्य | स्तोतुम् | स्तुत्वा |
| स्थित | स्थेय,स्थानीय,स्थातव्य | स्थातुम् | स्थित्वा |
| स्नात | स्नेय,स्नानीय,स्नातव्य | स्नातुम् | स्नात्वा |
| स्निग्ध,स्नीढ | स्निह्य,स्नेहनीय,स्नेहितव्य | स्नेहितुम् | स्निहित्वा |
| | स्नेग्धव्य, स्नेढव्य | स्नेग्धुम्,स्नेढुम् | स्नेहित्वा |
| स्पन्दित | स्पन्द्य,स्पन्दनीय,स्पन्दितव्य | स्पन्दितुम् | स्पन्दित्वा |
| स्पर्धित | स्पर्ध्य,स्पर्धनीय,स्पर्धितव्य | स्पर्धितुम् | स्पर्धित्वा |
| स्पृष्ट | स्पृश्य,स्पर्शनीय,स्पर्ष्टव्य,स्प्रष्टव्य | स्प्रष्टुम्,स्पर्ष्टुम् | स्पृष्ट्वा |
| स्पृहित | स्पृह्य,स्पृहणीय,स्पहयितव्य | स्पृहयितुम् | स्पृहयित्वा |
| स्फुरित | स्फोर्य,स्फुरणीय,स्फुरितव्य | स्फुरितुम् | स्फुरित्वा |
| स्मित | स्मेय,स्मयनीय,स्मेतव्य | स्मेतुम् | स्मित्वा |
| स्मृत | स्मार्य,स्मरणीय,स्मर्तव्य | स्मर्तुम् | स्मृत्वा |
| सुप्त | स्वप्य,स्वपनीय,स्वप्तव्य | स्वप्तुम् | सुप्त्वा |
| स्वादित | स्वाद्य,स्वादनीय,स्वादितव्य | स्वादितुम् | स्वादित्वा |
| हत | वध्य,घात्य,हननीय,हन्तव्य | हन्तुम् | हत्वा |
| हसित | हास्य,हसनीय,हसितव्य | हसितुम् | हसित्वा |
| हीन | हेय,हानीय,हातव्य | हातुम् | हित्वा |
| हान | हेय,हानीय,हातव्य | हातुम् | हात्वा |
| हुत | हव्य,हाव्य,हवनीय,होतव्य | होतुम् | हुत्वा |
| हृत | हार्य,हरणीय,हर्तव्य | हर्तुम् | हृत्वा |
| हूत | ह्वेय,ह्वयनीय,ह्वातव्य | ह्वातुम् | हूत्वा |



# ಅಧ್ಯಾಯ ೧೩

# ಪ್ರಯೋಗಗಳು (VOICES)

ಸಂಸ್ಕೃತ ವಾಕ್ಯಗಳಲ್ಲಿ ಮೂರು ತರಹದ ಪ್ರಯೋಗಗಳನ್ನು ಕಾಣುತ್ತೇವೆ. 1) ಕರ್ತರಿ ಪ್ರಯೋಗ, 2) ಕರ್ಮಣಿ ಪ್ರಯೋಗ ಹಾಗೂ 3) ಭಾವೇ ಪ್ರಯೋಗ.

1) ಕರ್ತರಿ ಪ್ರಯೋಗ - ಇಲ್ಲಿ ಕ್ರಿಯೆಯಿಂದ ಸೂಚಿತವಾಗಿ ಕರ್ತೃಪದವು ಪ್ರಥಮಾ ವಿಭಕ್ತಿಯಲ್ಲಿರುತ್ತದೆ. (प्रथमान्तःकर्ता) ಕರ್ಮಪದವು ದ್ವಿತೀಯಾ ವಿಭಕ್ತಿಯಲ್ಲಿದ್ದು (द्वितीयान्तं कर्म) ಕ್ರಿಯಾಪದವು ಕರ್ತೃಪದದ ಪುರುಷ ಮತ್ತು ವಚನವನ್ನು ಅನುಸರಿಸಿ ಇರುತ್ತದೆ(कर्तृपदमनुसृत्य क्रियापदम्).

प्रथमान्तो यत्र कर्ता द्वितीया कर्मणः पदे।
प्राधान्यं कर्तुरेवास्ति क्रिया कर्त्रनुसारिणी॥

ಉದಾ - कुलालः कलशं करोति ಎಂಬಲ್ಲಿ करोति ಎಂಬ ಕ್ರಿಯಾಪದದಿಂದ ಸೂಚಿತವಾದ ಕರ್ತೃ (ಕ್ರಿಯೆಗೆ ಯಾರು ಏನು ಎಂಬ ಪ್ರಶ್ನೆಗೆ ಬರುವ ಉತ್ತರ) कुलालः (ಕುಂಬಾರ). ಆದ್ದರಿಂದ ಅಲ್ಲಿ ಪ್ರಥಮಾ ವಿಭಕ್ತಿಯಲ್ಲಿದೆ. ಕರ್ಮಪದವು (ಕ್ರಿಯೆಗೆ ಯಾರನ್ನು ಅಥವಾ ಏನನ್ನು ಎಂದು ಮಾಡಿದ ಪ್ರಶ್ನೆಗೆ ಬರುವ ಉತ್ತರ) कलशं (ಗಡಿಗೆಯನ್ನು), ಇಲ್ಲಿ ದ್ವಿತೀಯಾ ವಿಭಕ್ತಿ ಇದೆ. ಕರ್ತೃಪದವು (कुलालः) ಪ್ರಥಮ ಪುರುಷ ಏಕವಚನದಲ್ಲಿರುವದರಿಂದ करोति ಕ್ರಿಯಾಪದವು ಪ್ರ.ಪು.ಏ.ವ.ದಲ್ಲಿದೆ. ಇದೇ ರೀತಿಯಲ್ಲಿ वयं फलानि खादामः, त्वं पाठं पठसि ಮುಂ. ವಾಕ್ಯಗಳು ಕರ್ತೃರಿ ಪ್ರಯೋಗದಲ್ಲಿವೆ.

2) ಕರ್ಮಣಿ ಪ್ರಯೋಗ - ಇಲ್ಲಿ ಕರ್ತೃಪದವು ತೃತೀಯಾ ವಿಭಕ್ತಿಯಲ್ಲಿದ್ದು (तृतीयान्तः कर्ता) ಕರ್ಮಪದವು ಪ್ರಥಮಾ ವಿಭಕ್ತಿಯಲ್ಲಿರುತ್ತದೆ (प्रथमान्तं कर्म). ಕ್ರಿಯಾಪದವು ಮಾತ್ರ ಕರ್ಮಪದದ ಪುರುಷವಚನಗಳನ್ನು ಅನುಸರಿಸಿ (कर्मपदं अनुसृत्य क्रियापदम्) ಇರುತ್ತದೆ. ಉದಾ - माधवेन कंसः हन्यते ಎಂಬಲ್ಲಿ ಕರ್ತೃಪದವು माधवेन ಎಂದು ತೃತೀಯಾ ವಿಭಕ್ತಿಯಲ್ಲಿದೆ. कंसः ಕರ್ಮಪದವು ಪ್ರಥಮಾ ವಿಭಕ್ತಿಯಲ್ಲಿದೆ. ಇದು ಪ್ರ.ಪು.ಏ.ವ.ದಲ್ಲಿ ಇದ್ದದ್ದರಿಂದ हन्यते ಕ್ರಿಯಾಪದವು ಪ್ರ.ಪು.ಏ.ವ.ದಲ್ಲಿಯೇ ಇದೆ. हन्यते 'ಕೊಲ್ಲಲ್ಪಡುತ್ತಾನೆ' ಈ ಕ್ರಿಯೆಯಿಂದ ಸೂಚಿತವಾದ ಪದವು कंसः. ಆದ್ದರಿಂದ ಕರ್ಮಣಿ ಪ್ರಯೋಗದಲ್ಲಿ ಕರ್ಮವು ಪ್ರಧಾನವಾಗಿದ್ದು ಅದು ಕ್ರಿಯಾಪದವನ್ನು ನಿಯಂತ್ರಿಸುತ್ತದೆ. हन्यते ಎಂಬಲ್ಲಿ हन् ಧಾತುವಿದೆ 'य' ಪ್ರತ್ಯಯ ಮತ್ತು ಆತ್ಮನೇ ಪದದ ಪ್ರತ್ಯಯ ಹಚ್ಚಿ ಪ್ರ.ಪು.ಏ.ವ.ದಲ್ಲಿಡಲಾಗಿದೆ. ಹೀಗೆಯೇ विष्णुना प्रपञ्चः क्रियते, बालैः कथाः पठ्यन्ते, त्वया फलं खाद्यते, अस्माभिः देवाः नम्यन्ते ಮುಂ. ವಾಕ್ಯಗಳು ಕರ್ಮಣಿ ಪ್ರಯೋಗದಲ್ಲಿವೆ. ವಿ.ಸೂ. ಸಂಸ್ಕೃತದಲ್ಲಿ ಕೆಲವು ಧಾತುಗಳು ಕರ್ಮಪದವನ್ನು

ಪಡೆಯುತ್ತವೆ (सकर्मक). ಇನ್ನು ಕೆಲವು ಕರ್ಮಪದವನ್ನು ಪಡೆಯುವದಿಲ್ಲ (अकर्मक). ಹೀಗೆ ಎರಡು ವಿಧ. ಅವುಗಳಲ್ಲಿ ಸಕರ್ಮಕ ಧಾತುಗಳಿಗೆ ಮಾತ್ರ ಕರ್ಮಣಿ ಪ್ರಯೋಗ ಸಾಧ್ಯ.

प्रथमान्तं पदं कर्म तृतीया कर्तृसंज्ञके।
कर्मप्रधानं तद्वाक्यं क्रिया कर्मानुसारिणी॥

ಕರ್ಮಣಿ ಪ್ರಯೋಗದ ರೂಪಗಳಿದ್ದ ಧಾತು ಅಕರ್ಮಕ ಇದ್ದಲ್ಲಿ ಅವು ಭಾವೇ ಪ್ರಯೋಗವಾಗುತ್ತವೆ.

ನಿಯಮಗಳು :

ಕರ್ತರಿ ಪ್ರಯೋಗದಿಂದ ಕರ್ಮಣಿ ಪ್ರಯೋಗಕ್ಕೆ ಬದಲಾಯಿಸುವಾಗ ಅದು ಯಾವುದೇ ಪದದ ಧಾತುವಿದ್ದರೂ ಆದಕ್ಕೆ 'य' ಪ್ರತ್ಯಯ ಹಚ್ಚಿ ಆತ್ಮನೇ ಪದದ ಆಖ್ಯಾತ ಪ್ರತ್ಯಯಗಳನ್ನು ಸೇರಿಸಬೇಕು. ಉದಾ - राधया माला गृह्यते ಎಂಬಲ್ಲಿ गृह् + य + ते ಎಂಬ ಆತ್ಮನೇಪದ ಪ್ರತ್ಯಯ ಹಚ್ಚಲಾಗಿದೆ. ಹೀಗೆ 'य' ಪ್ರತ್ಯಯ ಹಚ್ಚುವಾಗ ಕೆಲವು ಬದಲಾವಣೆಗಳಾಗುತ್ತವೆ.

1) दा-ददाति, धा-दधाति, मा-माति, हा-जहाति ಮತ್ತು पा-पिबति ಈ ಧಾತುಗಳ ಕೊನೆಯ आ-ई ಆಗುತ್ತದೆ. दीयते, धीयते, मीयते, हीयते ಮತ್ತು पीयते ।

2) ಧಾತುಗಳ ಕೊನೆಯ इ ಅಥವಾ उ ದೀರ್ಘವಾಗುತ್ತದೆ. जि-जीयते, स्तु-स्तूयते।

3) ಧಾತುಗಳ ಕೊನೆಯ ऋ-र, ॠ-इर् ಆಗುತ್ತದೆ. कृ-क्रियते, तॄ-तीर्यते।

4) ಹಿಂದೆ ಸಂಯುಕ್ತ ವ್ಯಂಜನವಿರುವ ऋ-अर्-स्मृ-स्मर्यते।

5) पवर्ग ಅಥವಾ व् ಹಿಂದೆ ಇರುವ ॠ-उर् ಆಗುತ್ತದೆ. पॄ-पूर्यते।

6) 10ನೇ ಗಣದ ಧಾತುಗಳು (अय् ವಿಕರಣ ಇಲ್ಲದೆ) ಕ್ರಿಯಾಪದಗಳಾಗುವ ಬದಲಾವಣೆ ಹೊಂದುತ್ತವೆ. चुर्-चोर्यते।

7) यज्, प्रच्छ, वच्, वद्, स्वप् ಮುಂ. ಧಾತುಗಳ ಮೊದಲಿನ य्, र, व ಗಳು ಕ್ರಮವಾಗಿ इ-ऋ-उ ಆಗುತ್ತವೆ. ಹೀಗೆ इज्यते, पृच्छते, उच्यते, उद्यते, सुप्यते।

8) ಕೊನೆಯ न्-आ ಆಗುವದು ವಿಕಲ್ಪ. खन्-खन्यते अथवा खायते। जन्-जन्यते, जायते।

9) ಕೆಲವು ಉಪಾಂತ್ಯ (ಕೊನೆಯ ವರ್ಣದ ಹಿಂದಿನ) ಅನುನಾಸಿಕ ಲೋಪವಾಗುತ್ತವೆ. ध्वंस्-ध्वस्यते, बन्ध-बध्यते, शंस्-शस्यते, स्रंस-स्रस्यते।

10) अस् ಮತ್ತು ब्रू ಧಾತುಗಳಿಗೆ ಕರ್ಮಣಿ ರೂಪಗಳಿಲ್ಲ. ಅವುಗಳಿಗೆ भू ಮತ್ತು वच् ಗಳ ಕರ್ಮಣಿ ರೂಪಗಳನ್ನು ಬಳಸಬೇಕು. ಉದಾ-अस्-भूयते, ब्रू-उच्यते।

11) ಕೆಲವು ಧಾತುಗಳಿಗೆ ಅನಿಯಮಿತ ರೂಪಗಳಿವೆ. शीङ्-शय्यते, वस्-वसति,उष्यते।

12) ग्लै, म्लै, शो ಮುಂತಾದ ಧಾತುಗಳ ಕೊನೆಯ ಸ್ವರ आ ಆಗುತ್ತದೆ. ग्लै-ग्लाय म्लै-म्लायते, शो-शायते (ಸಣ್ಣದಾಗಿ ಮಾಡು) ಆದರೆ गै, सो, दा, धा ಧಾತುಗಳು ಕಾರಾಂತವಾಗುತ್ತವೆ. ಹೀಗೆ गीयते, सीयते (ಸೇಚನ), दीयते धीयते. ಮುಂ.

ಕೆಲವು ಪ್ರಮುಖ ಕರ್ಮಣಿ ರೂಪಗಳು ಹೀಗಿವೆ- (ಕೃದಂತಗಳ ಕೋಷ್ಟಕದಲ್ಲಿಯೂ ಕೊಡಲಾಗಿದ

| | | |
|---|---|---|
| अस्-भूयते | अधि+इ-अधीयते | आ+शास्-आशास्यते |
| इ-ईयते | कृ-क्रियते | खन्-खन्यते, खायते |
| गण्-गण्यते | गै-गीयते | गृह-गृह्यते |
| चि-चीयते | तृ-तीर्यते | त्यज-त्यज्यते |
| तप्-तप्यते | दा-दीयते | दिव-दीव्यते |
| दृश्-दृश्यते | धृ-(धारयति) धार्यते | धुञ्-धूयते |
| नी-नीयते | पृ-पूर्यते | पा-पीयते |
| प्रच्छ-पृच्छ्यते | बुध-बुध्यते | भू-भूयते |
| भाष्-भाष्यते | भृ-भ्रियते | भक्ष-भक्ष्यते |
| मुच्-मुच्यते | मृग-मृग्यते | मृ-म्रियते |
| म्लै-म्लायते | मा-मीयते | रच्-रच्यते |
| रुच्-रुच्यते | लभ्-लभ्यते | वन्द-वन्द्यते |
| वद्-उद्यते | वह्-उह्यते | वस्-उष्यते |
| विद्-विद्यते | शमु-शाम्यते | शस्-शस्यते |
| शी-शय्यते | शुच-शुच्यते | श्रु-श्रूयते |
| सिच्-सिच्यते | स्था-स्थीयते | स्पृह-स्पृह्यते |
| स्निह्-स्निह्यते | स्मृ-स्मर्यते | स्तु-स्तुत्यते |
| स्वप्-सुप्यते | हन-हन्यते | हा-हीयते |
| हृ-ह्रियते | ह्वे-हूयते | क्षल्-क्षाल्यते |

3) ಭಾವೇ ಪ್ರಯೋಗ - ಅಕರ್ಮಕ ಧಾತುಗಳನ್ನು ಕರ್ಮಣಿ ಪ್ರಯೋಗದಲ್ಲಿ ವಾಕ್ಯರಚ ಮಾಡಿದಾಗ ಭಾವೇ ಪ್ರಯೋಗದ ವಾಕ್ಯಗಳಾಗುತ್ತವೆ. ಇಲ್ಲಿ ವಿಶೇಷವೆಂದರೆ ಕರ್ತೃ ಪದ ತೃತೀಯಾದಲ್ಲಿದ್ದು ಕ್ರಿಯಾಪದವು ಪ್ರಥಮ ಪುರುಷ ಏಕವಚನದಲ್ಲಿಯೇ ಇರುತ್ತದೆ. ಉದ (मत्स्यैः क्रीड्यते), कृष्णेन स्थीयते ಇಲ್ಲಿ ಕರ್ತೃ ತೃತೀಯಾ ವಿಭಕ್ತಿಯಲ್ಲಿದ್ದು स्थीय ಎಂಬುದು ಅಕರ್ಮಕ ಪ್ರಯೋಗವಾಗಿದ್ದು ಪ್ರಥಮ ಪುರುಷ ಏಕವಚನದಲ್ಲಿದೆ. ಹೀಗೆ मत्स् क्रीड्यते, चन्द्रेण क्षीयते, मया जीव्यते, तैः रुद्यते ಮುಂ.

ಕೆಳಗಿನ ಶ್ಲೋಕಗಳಲ್ಲಿ ಅಕರ್ಮಕ ಧಾತುಗಳನ್ನು ಕಾಣಬಹುದು -

वृद्धि-क्षय-भय-जीवित-मरणं-लज्जा-सत्ता-स्थिति-जागरणम्।
शयन-क्रीडा-रुचि-दीप्त्यर्थं धातुगणं तमकर्मकमाहुः ॥
कुट्-कण्ठ-भ्रम-यत्न-ग्लै-जृ-कृप्-च्युत्-सामर्थ्य क्षरणम्।
शान्ति-ध्वनि-मज्जन-वैक्लव्यं-जृम्भण-रम्भण-रोदन-हसनम् ॥

1) ಕರ್ತರಿ ಪ್ರಯೋಗದಿಂದ ಭಾವೇ ಪ್ರಯೋಗಕ್ಕೆ ಬದಲಾಯಿಸುವಾಗ ಮೇಲೆ ಹೇಳಿದಂತೆ ಕರ್ತೃಪದವನ್ನು ತೃತೀಯಾದಲ್ಲಿಯೂ ಕ್ರಿಯಾಪದವನ್ನು ಪ್ರಥಮ ಪುರುಷ ಏಕವಚನದಲ್ಲಿ ಕರ್ಮಣಿ ರೂಪದ ನಿಯಮಗಳೊಂದಿಗೆ ಇಡಬೇಕು. ಉದಾ-शिशुः रोदिति-शिशुना रुद्यते। प्राणाः सन्ति-प्राणैः भूयते। युवां तिष्ठथः-युवाभ्यां स्थीयते।

2) ಕರ್ತರಿಯಲ್ಲಿ ಕ್ರಿಯಾಪದವು ಭೂತಕಾಲದಲ್ಲಿದ್ದರೆ ಭಾವೇ ಪ್ರಯೋಗದಲ್ಲಿ ಕರ್ಮಣಿ ಭೂತಕೃದಂತವನ್ನು ಉಪಯೋಗಿಸಬಹುದು. ಉದಾ-सः उपाविशत्-तेन उपविष्टम्। ते सागरे अभवन्-तैः सागरे भूतम्।

3) ಕ್ರಿಯಾಪದವು ವಿಧ್ಯರ್ಥದಲ್ಲಿದ್ದರೆ ವಿಧ್ಯರ್ಥ ಕೃದಂತವನ್ನು ಉಪಯೋಗಿಸಬಹುದು.ಉದಾ -शिष्याः सावधानाः भवेयुः-शिष्यैः सावधानेन भाव्यम्। उमा गङ्गायां क्रीडेत्-उमया गंगायां क्रीडितव्यम्।

4) ಕರ್ತರಿಯಲ್ಲಿ ಕ್ರಿಯಾಪದವಿಲ್ಲದೆ ಕೃದಂತವನ್ನು ಉಪಯೋಗಿಸಿದಾಗ ಭಾವೇ ಪ್ರಯೋಗದಲ್ಲಿ ಆ ಕೃದಂತದ ನಪುಂಸಕಲಿಂಗದ ಪ್ರಥಮಾ ವಿಭಕ್ತಿಯ ಏಕವಚನವನ್ನು ಬಳಸುವದು. ಉದಾ-मृगाः पञ्जरे स्थिताः-मृगैः पञ्जरे स्थितम्। वनिताः वने भीताः-वनिताभिः वने भीतम्।

**ಕರ್ತರಿ ಪ್ರಯೋಗದಿಂದ ಕರ್ಮಣಿಗೆ ಪರಿವರ್ತನೆ**

1) ಕರ್ತರಿ ಮತ್ತು ಕರ್ಮಣಿ ಪ್ರಯೋಗದ ಸ್ವರೂಪಗಳನ್ನು ಮೇಲೆ ನೋಡಲಾಗಿದೆ. ಕರ್ತರಿ ಪ್ರಯೋಗದಿಂದ ಕರ್ಮಣಿಗೆ ಬದಲಾಯಿಸುವಾಗ 1) ಕರ್ತೃ ಪದವನ್ನು ತೃತೀಯಾ ವಿಭಕ್ತಿಯಲ್ಲಿಡಬೇಕು. 2) ಕರ್ಮ ಪದವನ್ನು ಪ್ರಥಮಾ ವಿಭಕ್ತಿಯಲ್ಲಿ ಇಡಬೇಕು. 3) ಕ್ರಿಯಾಪದಕ್ಕೆ ಕರ್ಮಪದದ ಪುರುಷ ಮತ್ತು ವಚನವನ್ನನುಸರಿಸಿ ಪ್ರತ್ಯಯ ಹಚ್ಚಬೇಕು. 4) ಕರ್ತೃ ಕರ್ಮ ಪದಗಳ ವಿಶೇಷಣಗಳಿಗೂ ಕರ್ತೃ ಕರ್ಮ ಪದಗಳ ರೂಪಗಳನ್ನೇ ಹಚ್ಚಬೇಕು. ಉದಾ-सुतः जनकं नमति-सुतेन जनकः नम्यते। सा त्वां नमति-तया त्वं नम्यसे। त्वं मां नमसि-त्वया अहं नम्ये। बालाः लेखान् लिखन्ति-बालैः लेखाः लिख्यन्ते। बालिकाः पाठौ पठन्ति-बालिकाभिः पाठौ पठ्येते। छात्रः प्रातः आश्रमे मित्रैः सह मधुरान् मोदकान् खादति-छात्रेण प्रातः आश्रमे मित्रैः सह मधुराः मोदकाः खाद्यन्ते। चतुरः बालः दीपं आनयत्-

चतुरेण बालेन दीपः आनीयते। 5) ಕರ್ತರಿ ಪ್ರಯೋಗದಲ್ಲಿಯ ಆಜ್ಞಾರ್ಥಾದಿ 'ಅರ್ಥ' ಗಳ ರೂಪಗಳನ್ನು ಕರ್ಮಣಿಯಲ್ಲಿಯೂ ಅನುಸರಿಸಬೇಕು. माता पाकं करोतु-मात्रा पाकः क्रीयताम्। राजा शत्रून् जयेत्-राज्ञा शत्रवः जीयेरन्, जिताः भवेयुः।

6) ಭೂತಕಾಲದ ಕರ್ಮಣಿ ರೂಪಗಳ ಬದಲು ಕರ್ಮಣಿ ಭೂತಕೃದಂತ ರೂಪಗಳನ್ನು ಇಡಬಹುದು. ಇಲ್ಲಿಯೂ ಕರ್ಮಣಿ ಪದಕ್ಕನುಸರಿಸಿ ಕೃದಂತಗಳ ಲಿಂಗವಚನಗಳನ್ನು ಇಡಬೇಕು. ಉದಾ-मृगः आहारं अत्यजत् ಅಥವಾ मृगेण आहारः अत्यज्यत ಅಥವಾ त्यक्तः। अहं क्लेशं असहे-मया क्लेशः असह्यत ಅಥವಾ सोढः। छात्राः प्रश्नान् लिखितवन्तः-छात्रैः प्रश्नाः लिखिताः। (ಕೃದಂತ ರೂಪಗಳನ್ನು 12ನೇ ಪ್ರಕರಣದಲ್ಲಿ ಕೊಡಲಾಗಿದೆ). 'ಅರ್ಥ'ಗಳು ಇದ್ದಲ್ಲಿ ಕರ್ಮಣಿ ಕೃದಂತರೂಪ ಇಟ್ಟು भू-अस् ಮುಂತಾದ ಧಾತುಗಳ ಆಯಾ 'ಅರ್ಥ'ದ ರೂಪ ಜೋಡಿಸಬಹುದು. ಉದಾ-देवः जलं दद्यात्-देवेन जलं दत्तं भवेत्। नरः इन्द्रियं जयेत्-नरेण इन्द्रियं जितं स्यात्।

5) ಸಂಸ್ಕೃತದಲ್ಲಿ ಪ್ರಮುಖವಾಗಿ 16 ದ್ವಿಕರ್ಮಕ ಧಾತುಗಳಿವೆ.

दुह्याच्-पच्-दण्ड्-रुधि-चि-ब्रू-शास-जि-मन्थ-मुषाम्।
कर्मयुक् स्यादकथितं तथा स्यान्नी-हृ-कृष्-वहाम्॥

ಇವುಗಳಿರುವ ವಾಕ್ಯದಲ್ಲಿ ಒಂದು ಕರ್ಮಪ್ರಧಾನ ಇನ್ನೊಂದು ಗೌಣವಿರುತ್ತದೆ. ಉದಾ-कैकेयी पतिं वरं याचते-ಇಲ್ಲಿ वरं ಎಂಬುದು ಕ್ರಿಯೆಗೆ ಹೆಚ್ಚು ಸಂಬದ್ಧ ಆದ್ದರಿಂದ ಅದು ಪ್ರಧಾನ ಮತ್ತು पतिं ಇದು ಗೌಣ. ಹೀಗಿರುವಾಗ ಕರ್ತರಿ ಪ್ರಯೋಗದಿಂದ ಕರ್ಮಣಿಗೆ ಬದಲಾಯಿಸುವಲ್ಲಿ गौणकर्मಪದ ಪ್ರಥಮಾದಲ್ಲಿ ಇಟ್ಟು ಪ್ರಧಾನಕರ್ಮವನ್ನು ಮಾತ್ರ ದ್ವಿತೀಯಾ ವಿಭಕ್ತಿಯಲ್ಲಿಯೇ ಇಡಬೇಕು. ಅಂದರೆ कैकेय्या पतिः वरं अयाच्यत। ಈ ನಿಯಮವು 16ರಲ್ಲಿ ಮೊದಲಿನ 12 ದ್ವಿಕರ್ಮಕ ಧಾತುಗಳಿಗೆ ಮಾತ್ರ. ಅಂದರೆ दुह्-याच्-पच्-दण्ड्-रुधि-पृच्छ-चि-ब्रू-शास्-जी-मन्थ ಮತ್ತು मृष् ಇವುಗಳಿರುವ ವಾಕ್ಯಗಳಲ್ಲಿ. ಉದಾ-नन्दः धेनूः पयः दोग्धि-नन्देन धेनवः पयः दुह्यन्ते। हरिः बलिं भूमिं अयाचत-हिरणा बलिः भूमिं अयाच्यत। सुता तण्डुलान् ओदनं पचति-सुतया तण्डुलाः ओदनं पच्यन्ते। राजा चोरान् पञ्चाशत् दण्डयति- राज्ञा चोराः पञ्चाशत् दण्ड्यन्ते। गुरुः शिष्यान् धर्मं ब्रूते-गुरुणा शिष्यः धर्मं उच्यते। देवासुराः सागरं सुधाम् अमथ्नन्-देवासुरैः सागरः सुधाम् अमथ्यत। सः गुरुं प्रश्नान् प्रच्छति-तेन गुरुः प्रश्नान् पृच्छते। गुरुः शिष्यान् आचारान् शास्ति- गुरुणा शिष्याः आचारान् शास्यन्ते। प्रजाः रामं युवराजं अचिन्वन्-प्रजाभिः रामः युवराजं अचीयत। युवती युवानं हृदयं मुष्णाति-युवत्या युवा हृदयं मुष्यते। राजा वारिणे गतिं रुणद्धि-राज्ञा वैरी गतिं रुद्ध्यते। ಉಳಿದ नी-हृ-कृष्-वह ಈ ನಾಲ್ಕು ಧಾತುಗಳಿರುವ ವಾಕ್ಯಗಳಲ್ಲಿ प्रधानकर्मವನ್ನು ಪ್ರಥಮ

ವಿಭಕ್ತಿಯಲ್ಲಿಯೂ गौणकर्मवನ್ನು ದ್ವಿತೀಯಾ ವಿಭಕ್ತಿಯಲ್ಲಿಯೂ ಇಡಬೇಕು. ಉದಾ-माता शालां बालं नयति-मात्रा शालां बालः नीयते। कृषिकः क्षेत्रं हलं कर्षति-कृषिकेन क्षेत्रं हलः कृष्यते। पिता व्रीहीन् गृहान् वहति-पित्रा व्रीहयः गृहान् उह्यन्ते। असुराः सुरां पातालं हरन्ति-असुरैः सुरा पातालं ह्रियते।

1) ಪ್ರೇರಣಾರ್ಥಕ ಕ್ರಿಯಾಪದಗಳ ಬದಲಾವಣೆ

ಧಾತುವು ಸಕರ್ಮಕವಿದ್ದಲ್ಲಿ ಮೂಲವಾಕ್ಯದ ಕರ್ತೃಪದವೂ ಪ್ರೇರಣಾರ್ಥಕದಲ್ಲಿ ತೃತೀಯಾ ವಿಭಕ್ತಿಯಲ್ಲಿ ಇರುತ್ತದೆ. ಮೂಲವಾಕ್ಯ-शिवः ग्रन्थं लिखति। ಪ್ರೇರಣಾರ್ಥಕ-सः शिवेन ग्रन्थं लेखयति। ಕರ್ಮಣಿಯಲ್ಲಿ ಮೂಲವಾಕ್ಯದ ಕರ್ತೃಪದವು ತೃತೀಯಾದಲ್ಲಿದ್ದು ಕರ್ಮಪದವು ಪ್ರಥಮಾ ವಿಭಕ್ತಿಯಲ್ಲಿರುತ್ತದೆ. (तेन) शिवेन ग्रन्थः लेख्यते। मेघः रसं ददाति- (इन्द्रः) मेघेन रसं दापयति। ಕರ್ಮಣಿ (इन्द्रेण) मेघेन रसः दाप्यते।

2) ಧಾತುಗಳು ಅಕರ್ಮಕವಿದ್ದಲ್ಲಿ-ಪ್ರೇರಣಾರ್ಥಕದಲ್ಲಿ ಮೂಲವಾಕ್ಯದ ಕರ್ತೃವು ದ್ವಿತೀಯಾದಲ್ಲಿರುತ್ತದೆ.ಮೂಲ-गृहे शाकः अस्ति। (ಶಾಕಃ=ಪಲ್ಲೆ) ಪ್ರೇರಣಾರ್ಥಕ-(पिता) गृहे शाकं आसयति। ಮೂಲವಾಕ್ಯದಲ್ಲಿ ಪ್ರಥಮಾ ವಿಭಕ್ತಿಯಲ್ಲಿದ್ದ ಕರ್ತೃಪದವು ಪ್ರೇರಣಾರ್ಥಕದಲ್ಲಿ ದ್ವಿತೀಯಾವಿಭಕ್ತಿ ಹೊಂದಿ ಕರ್ಮಣಿ ಪ್ರಯೋಗದಲ್ಲಿ ಅದು ಮತ್ತೆ ಪ್ರಥಮಾ ವಿಭಕ್ತಿಗೆ ಬರುತ್ತದೆ-(पित्रा) गृहे शाकः आस्यते। (ಸಾಮಾನ್ಯ ಕರ್ಮಣಿಯಲ್ಲಿ भूयते ಎಂದಾಗುತ್ತದೆ. ಪ್ರೇರಣಾರ್ಥಕ ಕರ್ಮಣಿಯಲ್ಲಿ आस्यते). ಹೀಗೆಯೇ ಮೂಲ-गति-बुद्धि-प्रत्यवसान (खादनं) शब्दकर्म (अध्ययन) ಈ ಧಾತುಗಳಿದ್ದಾಗ ಮೂಲವಾಕ್ಯದ ಕರ್ತೃ ಪ್ರೇರಣಾರ್ಥಕದಲ್ಲಿ (ಣಿಜಂತ) ದ್ವಿತೀಯಾದಲ್ಲಿದ್ದು ಕರ್ಮಣಿಯಲ್ಲಿಯೂ ದ್ವಿತೀಯಾದಲ್ಲಿ ಇರಬಹುದು. ಆಗ ಮೂಲದಲ್ಲಿದ್ದ ಕರ್ಮಪದ ಪ್ರಥಮಾದಲ್ಲಿರುತ್ತದೆ. ಮೂಲ- बालाः शालां गच्छन्ति। ಪ್ರೇರಣಾರ್ಥಕ- पिता बालान् शालां गमयति। ಕರ್ಮಣಿ- पित्रा बालाः शालां गमयन्ते। ಅಥವಾ पित्रा बालान् शालां गमयन्ते। (गम्यते ಎಂದು ಅಕರ್ಮಕದಿಂದ ಭಾವೇ ಪ್ರಯೋಗವೂ ಇದೆ.)

ಮೂಲ-गौरी रसं भुङ्क्ते-ಪ್ರೇ. (माता) गौरीं रसं भोजयति। ಕರ್ಮಣಿ मात्रा-गौरी रसं भोज्यते ಅಥವಾ (मात्रा) गौरीं रसं भोज्यते। ಮೂಲ-छात्रः श्लोकं बोधति। (ಗಣ-1) ಪ್ರೇ.-गुरुः छात्रं श्लोकं बोधयति। ಕರ್ಮಣಿ-गुरुणा छात्रः श्लोकं बोध्यते ಅಥವಾ गुरुणा छात्रं श्लोकः बोध्यते। ಮೂಲ-बालः वेदं अधीते। ಪ್ರೇ.-गुरुः बालं वेदं अध्यापयति। ಕರ್ಮಣಿ-गुरुणा बालः वेदं अध्याप्यते ಅಥವಾ गुरुणा बालं वेदः अध्याप्यते।



चतुरेण बालेन दीपः आनीयते। 5) ಕರ್ತರಿ ಪ್ರಯೋಗದಲ್ಲಿಯ ಆಜ್ಞಾರ್ಥಾದಿ 'ಅರ್ಥ' ಗಳ ರೂಪಗಳನ್ನು ಕರ್ಮಣಿಯಲ್ಲಿಯೂ ಅನುಸರಿಸಬೇಕು. माता पाकं करोतु-मात्रा पाकः क्रीयताम्। राजा शत्रून् जयेत्-राज्ञा शत्रवः जीयेरन्, जिताः भवेयुः।

6) ಭೂತಕಾಲದ ಕರ್ಮಣಿ ರೂಪಗಳ ಬದಲು ಕರ್ಮಣಿ ಭೂತಕೃದಂತ ರೂಪಗಳನ್ನು ಇಡಬಹುದು. ಇಲ್ಲಿಯೂ ಕರ್ಮಣಿ ಪದಕ್ಕನುಸರಿಸಿ ಕೃದಂತಗಳ ಲಿಂಗವಚನಗಳನ್ನು ಇಡಬೇಕು. ಉದಾ-मृगः आहारं अत्यजत् ಅಥವಾ मृगेण आहारः अत्यज्यत ಅಥವಾ त्यक्तः। अहं क्लेशं असहे-मया क्लेशः असह्यत ಅಥವಾ सोढः। छात्राः प्रश्नान् लिखितवन्तः-छात्रैः प्रश्नाः लिखिताः। (ಕೃದಂತ ರೂಪಗಳನ್ನು 12ನೇ ಪ್ರಕರಣದಲ್ಲಿ ಕೊಡಲಾಗಿದೆ). 'ಅರ್ಥ'ಗಳು ಇದ್ದಲ್ಲಿ ಕರ್ಮಣಿ ಕೃದಂತರೂಪ ಇಟ್ಟು भू-अस् ಮುಂತಾದ ಧಾತುಗಳ ಆಯಾ 'ಅರ್ಥ'ದ ರೂಪ ಜೋಡಿಸಬಹುದು. ಉದಾ-देवः जलं दद्यात्-देवेन जलं दत्तं भवेत्। नरः इन्द्रियं जयेत्-नरेण इन्द्रियं जितं स्यात्।

5) ಸಂಸ್ಕೃತದಲ್ಲಿ ಪ್ರಮುಖವಾಗಿ 16 ದ್ವಿಕರ್ಮಕ ಧಾತುಗಳಿವೆ.

दुह्याच्-पच्-दण्ड्-रुधि-चि-ब्रू-शास-जि-मन्थ-मुषाम्।
कर्मयुक् स्यादकथितं तथा स्यान्नी-हृ-कृष्-वहाम्।।

ಇವುಗಳಿರುವ ವಾಕ್ಯದಲ್ಲಿ ಒಂದು ಕರ್ಮಪ್ರಧಾನ ಇನ್ನೊಂದು ಗೌಣವಿರುತ್ತದೆ. ಉದಾ-कैकेयी पतिं वरं याचते-ಇಲ್ಲಿ वरं ಎಂಬುದು ಕ್ರಿಯೆಗೆ ಹೆಚ್ಚು ಸಂಬದ್ಧ ಆದ್ದರಿಂದ ಅದು ಪ್ರಧಾನ ಮತ್ತು पतिं ಇದು ಗೌಣ. ಹೀಗಿರುವಾಗ ಕರ್ತರಿ ಪ್ರಯೋಗದಿಂದ ಕರ್ಮಣಿಗೆ ಬದಲಾಯಿಸುವಲ್ಲಿ गौणकर्मಪದ ಪ್ರಥಮಾದಲ್ಲಿ ಇಟ್ಟು, प्रधानकर्मವನ್ನು ಮಾತ್ರ ದ್ವಿತೀಯಾ ವಿಭಕ್ತಿಯಲ್ಲಿಯೇ ಇಡಬೇಕು. ಅಂದರೆ कैकेय्या पतिः वरं अयाच्यत। ಈ ನಿಯಮವು 16ರಲ್ಲಿ ಮೊದಲಿನ 12 ದ್ವಿಕರ್ಮಕ ಧಾತುಗಳಿಗೆ ಮಾತ್ರ. ಅಂದರೆ दुह्-याच्-पच्-दण्ड्-रुधि-पृच्छ-चि-ब्रू-शास्-जी-मन्थ ಮತ್ತು मृष् ಇವುಗಳಿರುವ ವಾಕ್ಯಗಳಲ್ಲಿ. ಉದಾ-नन्दः धेनूः पयः दोग्धि-नन्देन धेनवः पयः दुह्यन्ते। हरिः बलिं भूमिं अयाचत-हिरणा बलिः भूमिं अयाच्यत। सुता तण्डुलान् ओदनं पचति-सुतया तण्डुलाः ओदनं पच्यन्ते। राजा चोरान् पञ्चाशत् दण्डयति- राज्ञा चोराः पञ्चाशत् दण्ड्यन्ते। गुरुः शिष्याय धर्मं ब्रूते-गुरुणा शिष्यः धर्मं उच्यते। देवासुराः सागरं सुधाम् अमथ्नन्-देवासुरैः सागरः सुधाम् अमथ्यत। सः गुरुं प्रश्नान् प्रच्छति-तेन गुरुः प्रश्नान् पृच्छते। गुरुः शिष्यान् आचारान् शास्ति- गुरुणा शिष्याः आचारान् शास्यन्ते। प्रजाः रामं युवराजं अचिन्वन्-प्रजाभिः रामः युवराजं अचीयत। युवती युवानं हृदयं मुष्णाति-युवत्या युवा हृदयं मुष्यते। राजा वारिणे गतिं रुणद्धि-राज्ञा वैरी गतिं रुद्ध्यते। ಉಳಿದ नी-हृ-कृष्-वह् ಈ ನಾಲ್ಕು ಧಾತುಗಳಿರುವ ವಾಕ್ಯಗಳಲ್ಲಿ प्रधानकर्मವನ್ನು प्रथमा

ವಿಭಕ್ತಿಯಲ್ಲಿಯೂ गौणकर्मವನ್ನು ದ್ವಿತೀಯಾ ವಿಭಕ್ತಿಯಲ್ಲಿಯೂ ಇಡಬೇಕು. ಉದಾ-माता शालां बालं नयति-मात्रा शालां बालः नीयते। कृषिकः क्षेत्रं हलं कर्षति-कृषिकेन क्षेत्रं हलः कृष्यते। पिता व्रीहीन् गृहान् वहति-पित्रा व्रीहयः गृहान् उह्यन्ते। असुराः सुरां पातालं हरन्ति-असुरैः सुरा पातालं ह्रियते।

1) ಪ್ರೇರಣಾರ್ಥಕ ಕ್ರಿಯಾಪದಗಳ ಬದಲಾವಣೆ

ಧಾತುವು ಸಕರ್ಮಕವಿದ್ದಲ್ಲಿ ಮೂಲವಾಕ್ಯದ ಕರ್ತೃಪದವೂ ಪ್ರೇರಣಾರ್ಥಕದಲ್ಲಿ ತೃತೀಯಾ ವಿಭಕ್ತಿಯಲ್ಲಿ ಇರುತ್ತದೆ. ಮೂಲವಾಕ್ಯ-शिवः ग्रन्थं लिखति। ಪ್ರೇರಣಾರ್ಥಕ-सः शिवेन ग्रन्थं लेखयति। ಕರ್ಮಣಿಯಲ್ಲಿ ಮೂಲವಾಕ್ಯದ ಕರ್ತೃಪದವು ತೃತೀಯಾದಲ್ಲಿದ್ದು ಕರ್ಮಪದವು ಪ್ರಥಮಾ ವಿಭಕ್ತಿಯಲ್ಲಿರುತ್ತದೆ. (तेन) शिवेन ग्रन्थः लेख्यते। मेघः रसं ददाति- (इन्द्रः) मेघेन रसं दापयति। ಕರ್ಮಣಿ (इन्द्रेण) मेघेन रसः दाप्यते।

2) ಧಾತುಗಳು ಅಕರ್ಮಕವಿದ್ದಲ್ಲಿ-ಪ್ರೇರಣಾರ್ಥಕದಲ್ಲಿ ಮೂಲವಾಕ್ಯದ ಕರ್ತೃವು ದ್ವಿತೀಯಾದಲ್ಲಿರುತ್ತದೆ.ಮೂಲ-गृहे शाकः अस्ति। (ಶಾಕಃ=ಪಲ್ಲೆ) ಪ್ರೇರಣಾರ್ಥಕ-(पिता) गृहे शाकं आसयति। ಮೂಲವಾಕ್ಯದಲ್ಲಿ ಪ್ರಥಮಾ ವಿಭಕ್ತಿಯಲ್ಲಿದ್ದ ಕರ್ತೃಪದವು ಪ್ರೇರಣಾರ್ಥಕದಲ್ಲಿ ದ್ವಿತೀಯಾವಿಭಕ್ತಿ ಹೊಂದಿ ಕರ್ಮಣಿ ಪ್ರಯೋಗದಲ್ಲಿ ಅದು ಮತ್ತೆ ಪ್ರಥಮಾ ವಿಭಕ್ತಿಗೆ ಬರುತ್ತದೆ-(पित्रा) गृहे शाकः आस्यते। (ಸಾಮಾನ್ಯ ಕರ್ಮಣಿಯಲ್ಲಿ भूयते ಎಂದಾಗುತ್ತದೆ. ಪ್ರೇರಣಾರ್ಥಕ ಕರ್ಮಣಿಯಲ್ಲಿ आस्यते). ಹೀಗೆಯೇ ಮೂಲ-गति-बुद्धि-प्रत्यवसान (खादनं) शब्दकर्म (अध्ययन) ಈ ಧಾತುಗಳಿದ್ದಾಗ ಮೂಲವಾಕ್ಯದ ಕರ್ತೃ ಪ್ರೇರಣಾರ್ಥಕದಲ್ಲಿ (ಣಿಜಂತ) ದ್ವಿತೀಯಾದಲ್ಲಿದ್ದು ಕರ್ಮಣಿಯಲ್ಲಿಯೂ ದ್ವಿತೀಯಾದಲ್ಲಿ ಇರಬಹುದು. ಆಗ ಮೂಲದಲ್ಲಿದ್ದ ಕರ್ಮಪದ ಪ್ರಥಮಾದಲ್ಲಿರುತ್ತದೆ. ಮೂಲ- बालाः शालां गच्छन्ति। ಪ್ರೇರಣಾರ್ಥಕ- पिता बालान् शालां गमयति। ಕರ್ಮಣಿ- पित्रा बालाः शालां गमयन्ते। ಅಥವಾ पित्रा बालान् शालां गमयन्ते। (गम्यते ಎಂದು ಅಕರ್ಮಕದಿಂದ ಭಾವೇ ಪ್ರಯೋಗವೂ ಇದೆ.)

ಮೂಲ-गौरी रसं भुङ्क्ते-ಪ್ರೇ. (माता) गौरीं रसं भोजयति। ಕರ್ಮಣಿ मात्रा-गौरी रसं भोज्यते ಅಥವಾ (मात्रा) गौरीं रसं भोज्यते। ಮೂಲ-छात्रः श्लोकं बोधति। (ಗಣ-1) ಪ್ರೇ.-गुरुः छात्रं श्लोकं बोधयति। ಕರ್ಮಣಿ-गुरुणा छात्रः श्लोकं बोध्यते ಅಥವಾ गुरुणा छात्रं श्लोकः बोध्यते। ಮೂಲ-बालः वेदं अधीते। ಪ್ರೇ.-गुरुः बालं वेदं अध्यापयति। ಕರ್ಮಣಿ-गुरुणा बालः वेदं अध्याप्यते ಅಥವಾ गुरुणा बालं वेदः अध्याप्यते।



## ಅ ಧ್ಯಾ ಯ ೧೪

# ಸ ಮಾ ಸ ಗ ಳು (COMPOUNDS)

ಬೇರೆ ಬೇರೆ ಅರ್ಥವಿರುವ ಪದಗಳು ಸೇರಿ ಒಂದೇ ಅರ್ಥವನ್ನು ಕೊಡುವ ಒಂದೇ ಪದವಾಗುವದಕ್ಕೆ ಸಮಾಸ ಅಥವಾ ಸಮಸ್ತಪದ ಎನ್ನಬಹುದು. (एकार्थवाचकतां प्राप्तौ भिन्नार्थकानेक-पद-समूहः समासः). ಈ 'ಒಂದೇ ಅರ್ಥವನ್ನು ಕೊಡುವ' ಎಂಬುದಕ್ಕೆ 'सामर्थ्य' ಅಥವಾ 'एकार्थीभाव' ಎನ್ನುವರು (समर्थः पदविधिः-पा.सू.)

ಸಮಾಸ ಮಾಡುವದು ಎಂದರೆನೇ ಸಂಕ್ಷೇಪಿಸುವದು (संक्षेपणं समसनं-अमरकोशः). ಅಂದರೆ ಅನೇಕ ಪದಗಳಿಂದ ಹೇಳಬೇಕಾಗಿರುವುದನ್ನು ಸಂಕ್ಷಿಪ್ತವಾಗಿ ಹೇಳುವುದಕ್ಕೆ ಸಮಾಸಗಳನ್ನು ಬಳಸುತ್ತಾರೆ. ಸಮಾಸದಲ್ಲಿ ಸೇರಿದ ಪದಗಳು ಸಾಮಾನ್ಯವಾಗಿ ವಿಭಕ್ತಿಪ್ರತ್ಯಯಗಳಿಲ್ಲದ ಪ್ರಾತಿಪದಕದ ರೂಪದಲ್ಲಿದ್ದು ಕೊನೆಯ ಪದಕ್ಕೆ ಮಾತ್ರ ಸರಿಯಾದ ವಿಭಕ್ತಿ ಪ್ರತ್ಯಯ ಸೇರುತ್ತದೆ. ಹೀಗೆ ಅನೇಕ ಪದಗಳಿಗಿರುವ ವಿಭಕ್ತಿ ಪ್ರತ್ಯಯಗಳ ಉಳಿತಾಯವೇ ಸಂಕ್ಷೇಪಣೆ. ಕನ್ನಡದಲ್ಲಿ 'ಅರಸನ ಮನೆ' ಎಂಬುದನ್ನು 'ಸನ' ತೆಗೆದು 'ಅರಮನೆ' ಎಂದು ಹೇಳುವಲ್ಲಿ ವಿಭಕ್ತಿಯ ಉಳಿತಾಯವನ್ನು ಕಾಣುತ್ತೇವೆ. ಹೀಗೆಯೇ ಎಂಟು, ಹತ್ತು ಪದಗಳ ಸಮಾಸದಲ್ಲಿ ಅಷ್ಟು ವಿಭಕ್ತಿಗಳ ಸಂಕ್ಷೇಪವಾಗುತ್ತದೆ. ಇದೇ ಸಮಾಸ.

ಸಮಾಸದಲ್ಲಿ ಕೂಡಿದ ಪದಗಳನ್ನು ಬಿಡಿಸಿ ಅವುಗಳ ಅರ್ಥವು ಸ್ಪಷ್ಟವಾಗುವಂತೆ, ಅವುಗಳ ಪರಸ್ಪರ ಸಂಬಂಧವನ್ನು ಸರಿಯಾದ ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳ ಮೂಲಕ ಅವಶ್ಯವಿದ್ದಲ್ಲಿ ಬೇರೆ ಪದಗಳನ್ನು ಬಳಸಿ ತಿಳಿಪಡಿಸುವದಕ್ಕೆ ವಿಗ್ರಹ ವಾಕ್ಯ ಎನ್ನುತ್ತಾರೆ.(तदर्थावबोधकं वाक्यं विग्रहः)

अर्थवत् समासः ಎಂಬಂತೆ ಸಮಾಸವನ್ನು ಸರಿಯಾದ ವಿಭಕ್ತಿಗಳಿಂದ ಅರ್ಥೈಸಿದಂತೆ ಸಂಸ್ಕೃತದಲ್ಲಿ ವಿಶದೀಕರಿಸುವುದೇ ವಿಗ್ರಹವಾಕ್ಯ. ಉದಾ-शूलपाणिः ಎಂಬಲ್ಲಿ ತ್ರಿಶೂಲವನ್ನು ಕೈಯಲ್ಲಿ ಹಿಡಿದುಕೊಂಡವನು ಯಾವನೋ ಅವನು (ಶಿವನು) ಎಂಬ ಅರ್ಥವನ್ನು ಸಂಸ್ಕೃತದಲ್ಲಿ शूलं पाणौ यस्य सः ಎಂದು ವಿಗ್ರಹವಾಕ್ಯದಿಂದ ಹೇಳಬಹುದು. शूलम् ಎಂಬ ಅನುಸ್ವಾರ ರೂಪದಲ್ಲಿಯ ದ್ವಿತೀಯಾವಿಭಕ್ತಿ ಪ್ರತ್ಯಯವು शूलपाणिः ಎಂಬಲ್ಲಿ ಉಳಿತಾಯವಾಗಿ ಸಮಾಸವಾಗಿದೆ.

ಸಂಸ್ಕೃತದಲ್ಲಿ ಪ್ರಮುಖವಾಗಿ ಆರು ಸಮಾಸಗಳಿವೆ. तत्पुरुषः कर्मधारयो-बहुव्रीहि द्विगुर्द्वन्द्वोऽव्ययीभावश्चेति। 1) तत्पुरुषः 2) कर्मधारयः 3) बहुव्रीहिः 4) द्विगुः 5) द्वन्द्वः 6) अव्ययीभावः ಇವುಗಳನ್ನು ಒಂದು ಶ್ಲೋಕದಲ್ಲಿ ಸ್ವಾರಸ್ಯಕರವಾಗಿ ಹೀಗೆ ಸೂಚಿಸಲಾಗಿದೆ-

द्वन्द्वो द्विगुरपि चाहं मद्गेहे नित्यमव्ययीभावः ।
तत्पुरुष कर्मधारय येनाहं बहुव्रीहिः स्याम् ॥ [ ಈ ಶ್ಲೋಕದಲ್ಲಿ ಸಮಾಸಗಳ

ಹೆಸರಿನ ಜೊತೆಗೆ ಬೇರೆ ಅರ್ಥವನ್ನು ಹೇಳಲಾಗಿದೆ. ವಿವಾಹಿತ (ದ್ವಂದ್ವ) ನಾದ ನಾನು ಎರಡು ಆಕಳುಗಳುಳ್ಳವನಾಗಿದ್ದೇನೆ (द्विगुः). ನಮ್ಮ ಮನೆಯಲ್ಲಿ (ಬಡತನದಿಂದ) ಯಾವಾಗಲೂ (नित्यं) ಖರ್ಚೇ ಇಲ್ಲ (अव्ययीभावः). ಆದ್ದರಿಂದ (तत्) ವತ್ಸನೇ (पुरुष) ಏನಾದರು ಕೆಲಸ ಹಿಡಿ (कर्मधारय) ಅದರಿಂದ ನಾನು ಬಹಳ (धान्य) ಭತ್ತ (बहुव्रीहिः) ಉಳ್ಳವನಾಗುವೆನು.]

ಕೆಲವರು द्विगु ಮತ್ತು कर्मधारय ಸಮಾಸಗಳನ್ನು ತತ್ಪುರುಷದಲ್ಲಿಯೇ ಸೇರಿಸಿ 4 ಪ್ರಮುಖ ವಿಧವೆಂದು ಹೇಳುತ್ತಾರೆ (द्विगुकर्मधारयौ तत्पुरुषप्रभेदौ)

1) ತತ್ಪುರುಷ ಸಮಾಸದಲ್ಲಿ ಉತ್ತರ ಪದವು ಪ್ರಧಾನವಾಗಿರುತ್ತದೆ. (उत्तरपदार्थप्रधानस्तत्पुरुषः) 2) ದ್ವಂದ್ವಸಮಾಸದಲ್ಲಿ ಸಾಮಾನ್ಯವಾಗಿ ಎರಡೂ ಪದಗಳೂ ಪ್ರಧಾನವಾಗಿರುತ್ತವೆ.(उभयपदार्थप्रधानो द्वन्द्वः) 3) ಬಹುವ್ರೀಹಿಯಲ್ಲಿ ಸಮಾಸದ ಪದಗಳನ್ನು ಬಿಟ್ಟು ಅವು ಸೂಚಿಸುವ ಅನ್ಯಪದವು ಪ್ರಧಾನವಾಗಿರುತ್ತದೆ (अन्यपदार्थप्रधानो बहुव्रीहिः) 4) ಅವ್ಯಯೀಭಾವಸಮಾಸದಲ್ಲಿ ಪೂರ್ವಪದವು ಪ್ರಧಾನವಾಗಿರುತ್ತದೆ (पूर्वपदार्थप्रधनोऽव्ययीभावः) ಕೆಲವರು ಇನ್ನೂ ಕೆಲವು ಪ್ರಭೇದಗಳನ್ನು ಸೇರಿಸಿ ಸಮಾಸಗಳ ಸಂಖ್ಯೆಯನ್ನು ಹೆಚ್ಚಿಸುತ್ತಾರೆ. ಪ್ರಮುಖವಾದ ಆರು ಸಮಾಸಗಳ ವಿವರಗಳನ್ನು ನೋಡೋಣ.

## I) त त्पु रु ष स मा सः

ಮೇಲೆ ಉಲ್ಲೇಖಿಸಿದಂತೆ ಸಾಮಾನ್ಯವಾಗಿ तत्पुरुष ಸಮಾಸದಲ್ಲಿ ಉತ್ತರಪದವು ಪ್ರಧಾನವಾಗಿರುತ್ತದೆ. ಈ ಸಮಾಸಕ್ಕೆ ಸಂಬಂಧಿಸಿದ ಕ್ರಿಯೆ ಅಥವಾ ವಿವರಣೆಯು ಉತ್ತರಪದಕ್ಕೆ ಮಾತ್ರ ಅನ್ವಯಿಸುತ್ತದೆ. ಉದಾ-नृपसेवकः आगतः (ರಾಜಸೇವಕನು ಬಂದನು) ಅಥವಾ नपस्य सेवकः आगतः ಎಂಬಲ್ಲಿ ಸೇವಕನು ಬಂದನು ಎಂಬುದು ಮುಖ್ಯವೆ ಹೊರತು ರಾಜನ (नृपस्य) ಎಂಬುದಲ್ಲ. ಏಕೆಂದರೆ ರಾಜನು ಬಂದಿಲ್ಲ. ಹೀಗೆ ಉತ್ತರಪದಾರ್ಥವು ಪೂರ್ವಪದಾರ್ಥಕ್ಕಿಂತ ವಿಶೇಷವಾಗಿರುವುದೇ ತತ್ಪುರುಷಸಮಾಸದ ವಿಶೇಷ.

ತತ್ಪುರುಷ ಸಮಾಸದಲ್ಲಿ ಮುಖ್ಯವಾಗಿ 4 ವಿಧ. 1) विभक्तितत्पुरुषः 2) नञ्तत्पुरुषः 3) प्रादितत्पुरुषः 4) उपपदतत्पुरुषः। अलुक्समासವು ಇದರದೇ ಒಂದು ಭೇದ.

1) विभक्ति तत्पुरुषसमासः- ಈ ಸಮಾಸದ ವಿಗ್ರಹವಾಕ್ಯಗಳಲ್ಲಿ ಮೊದಲಿನ ಪದವು ಪ್ರಥಮಾದಿ ವಿಭಕ್ತಿಗಳಲ್ಲಿರುತ್ತದೆ.

1) **प्रथमातत्पुरुषः** अर्ध-पिप्पल्याः = अर्धपिप्पली। आपन्नो देवान् = आपन्नदेवः। प्राप्तौ ग्रामौ = प्राप्तग्रामः। ಈ ಸಮಾಸಗಳಲ್ಲಿ ಪೂರ್ವಪದವು ಪ್ರಥಮಾವಿಭಕ್ತಿಯಲ್ಲಿಯೇ ಇದೆ. प्राप्त ಮತ್ತು आपन्न ಇವು ಉತ್ತರಪದವಾದಾಗ ಪೂರ್ವಪದವು ದ್ವಿತೀಯಾದಲ್ಲಿದ್ದು ಆಗ ದ್ವಿತೀಯಾತತ್ಪುರುಷಸಮಾಸವೂ ಆಗುವದು. ಉದಾಹರಣೆ ಮುಂದೆ ಕೊಡಲಾಗಿದೆ.

2) **द्वितीयातत्पुरुषः**-श्रित, अतीत, पतित, गत, अत्यस्त (ದಾಟಿದ) प्राप्त आपन्न (ಹೊಂದಿದ) गमी, बुभुक्षु ಈ ಪದಗಳೊಡನೆ ಸಮಾಸವಾದಾದ ವಿಗ್ರಹವಾಕ್ಯದಲ್ಲಿ ಪೂರ್ವಪದವು ದ್ವಿತೀಯಾ ವಿಭಕ್ತಿಯಲ್ಲಿರುತ್ತದೆ. ಉದಾ-कृष्णं श्रितः कृष्णश्रितः। कल्पनां अतीतः कल्पनातीतः। ಹೀಗೆಯೇ नरकपतितः, ग्रामगतः, वनात्यस्तः, गृहप्राप्तः, दुखापन्नः, वनगमी, अन्नबुभुक्षुः। ಸಾಮಾನ್ಯವಾಗಿ ಕಾಲಾವಧಿಯನ್ನು ಸೂಚಿಸುವ ಶಬ್ದಗಳು ಸಮಾಸದ ವಿಗ್ರಹವಾಕ್ಯದಲ್ಲಿ ದ್ವಿತೀಯಾ ವಿಭಕ್ತಿ ಪಡೆಯುತ್ತವೆ. ಉದಾ-क्षणं सुखं-क्षणसुखम्, वर्षं भोग्यं-वर्षभोग्यम्, मासं वासः-मासवासः, अयनवासः ಇತ್ಯಾದಿ.

3) **तृतीयातत्पुरुषः**- ಸಮಾಸದ ಉತ್ತರಪದವು पूर्व, सदृश, सम, ऊन ಅಥವಾ ಇವುಗಳ ಅರ್ಥವಿರುವಂಥವುಗಳು, ಅಲ್ಲದೇ कलह, निपुण, श्लक्ष्ण ಮತ್ತು अवर ಇವುಗಳಲ್ಲಿ ಒಂದಾಗಿದ್ದರೆ ಪೂರ್ವಪದವು ವಿಗ್ರಹವಾಕ್ಯದಲ್ಲಿ ತೃತೀಯಾ ವಿಭಕ್ತಿ ಪಡೆಯುತ್ತದೆ.ಉದಾ-मासेन पूर्वः-मासपूर्वः। पित्रा सदृशः-पितृसदृशः। ಹೀಗೆಯೇ भ्रातृसमः, एकोनः, वाक्कलहः, विद्यानिपुण, मधुरमिश्रः, आचारश्लक्षणः (ಅನಾಹಾರದಿಂದ ಸೊರಗಿದ) मासावरः (ಒಂದು ತಿಂಗಳಿನಿಂದ ಚಿಕ್ಕವ) गुञ्जाविकलम् (ಒಂದು ಗುಂಜಿಯಿಂದ ಕಡಿಮೆ)

त्रात, भिन्न, हत ಮುಂತಾದ ಕರ್ಮಣಿ ಭೂತಕೃದಂತಗಳು ಮತ್ತು ಕ್ರಿಯೆಯ ಕರ್ತೃವಾಚಕ ಅಥವಾ ಕರಣ (ಸಾಧನ) ವಾಚಕ ಪದಗಳೊಡನೆ तृतीया तत्पुरुष ಸಮಾಸವಾಗುತ್ತದೆ. ಉದಾ-हरिणा त्रातः-हरित्रातः, नखभिन्नः, बाणहतः, लोभमोहितः ಇತ್ಯಾದಿ.

4) **चतुर्थीतत्पुरुषः**-अर्थ, बलि, हित, सुख, रक्षित ಇವುಗಳಲ್ಲೊಂದು ಸಮಾಸದ ಉತ್ತರ ಪದವಾಗಿದ್ದರೆ ಸಮಾಸದ ಪೂರ್ವಪದವು ವಿಗ್ರಹವಾಕ್ಯದಲ್ಲಿ ಚತುರ್ಥೀವಿಭಕ್ತಿ ಪಡೆಯುತ್ತದೆ. ಉದಾ-द्विजाय अयं-द्विजार्थः सूपः। पित्रे इयं-पित्रर्था पूजा। देवेभ्यः इदं देवार्थं (हविः)। भूतेभ्यो बलिः-भूतबलिः। जगते हितं-जगद्धितम्। गवे सुखं-गोसुखम्, गोरक्षितम्।

ನಿರ್ಮಿಸಬೇಕಾದ ವಸ್ತುವಿನ ಮೂಲದ್ರವ್ಯವು ಉತ್ತರಪದವಾಗಿದ್ದು ಆ ವಸ್ತುವನ್ನು ಹೇಳುವ ಪದಕ್ಕೆ ಚತುರ್ಥಿ ಬಳಸಬೇಕು. ಉದಾ-यूपाय दारु-यूपदारु (ಯಜ್ಞದಲ್ಲಿ ಯೂಪಸ್ತಂಭವನ್ನು ನಿರ್ಮಿಸಲು ಬೇಕಾದ ಕಟ್ಟಿಗೆ) ಹೀಗೆಯೇ वलयकनकम्, घटमृत्तिका, औषधिफलम्।

5) **पञ्चमीतत्पुरुषः**- ಸಮಾಸದ ಉತ್ತರಪದವು ಭಯಾರ್ಥಕ भीतिः भीः साध्वसं, भयं-(अमरकोश)। ವಿದ್ದರೆ ವಿಗ್ರಹವಾಕ್ಯದಲ್ಲಿ ಪೂರ್ವಪದವು ಪಂಚಮೀ ವಿಭಕ್ತಿ ಪಡೆಯುತ್ತದೆ. चोरात् भयं-चोरभयम्, दैत्यभीतिः, व्याघ्रभीतिः।

ಸಮಾಸದ ಉತ್ತರಪದವು अपेत (ಹೊರತಾಗಿ), अपोढ (ನಿವಾರಿಸಿದ), मुक्त, पतित ಅಥವಾ अपत्रस्त (ಹೆದರಿದ) ಇದ್ದರೆ ವಿಗ್ರಹವಾಕ್ಯದಲ್ಲಿ ಪೂರ್ವಪದವು ಪಂಚಮೀ ವಿಭಕ್ತಿ ಪಡೆಯುತ್ತದೆ. ಉದಾ-सुखात् अपेतः-सुखापेतः। कल्पनापोढः, पापमुक्तः, स्वर्गात् पतितः, (ಇಲ್ಲಿ ಪತನವು ಕ್ರಮವಾಗಿ ಆಗಿದೆ. ಒಮ್ಮೆಲೆ ಬೀಳುವಲ್ಲಿ ಸಮಾಸವಾಗುವದಿಲ್ಲ- प्रासादात् पतितः) जलापत्रस्तः ಇತ್ಯಾದಿ.

**6) षष्ठीतत्पुरुषः-** ಈ ಸಮಾಸದಲ್ಲಿ ಪೂರ್ವೋತ್ತರ ಪದಗಳು ಸ್ವಸ್ವಾಮಿಭಾವ ಮುಂತಾದ ಸಂಬಂಧವನ್ನು ಸೂಚಿಸುತ್ತವೆ. ವಿಗ್ರಹವಾಕ್ಯದಲ್ಲಿ ಪೂರ್ವಪದವು ಷಷ್ಠೀ ವಿಭಕ್ತಿಯಲ್ಲಿ ಇರುತ್ತದೆ. ಉದಾ-पुत्रस्य जन्म-पुत्रजन्म, राज्ञः आज्ञा-राजाज्ञा, नदीतीरं, देवभक्तः।

ಷಷ್ಠೀ ತತ್ಪುರುಷ ನಿಷೇಧಿಸಿದ ನಿಯಮ - ಸಾಮಾನ್ಯವಾಗಿ तृ ಮತ್ತು अक ಇವು ಪದಾಂತವಾಗಿರುವ ಕರ್ತೃವಾಚಕ ಪದಗಳೊಡನೆ ಸಮಾಸವಾಗುವದಿಲ್ಲ. ಉದಾ-अपां स्रष्टा (स्रष्टृ) अप्स्रष्टा ಎಂದು ಆಗುವದಿಲ್ಲ. ಹಾಗೆಯೇ घटकर्ता ಅಥವಾ ओदनपाचकः, प्रजापालकः ಎಂದು ಆಗುವದಿಲ್ಲ. ಆದರೆ पूजक, याजक, परिचारक, परिवेषक, होतृ, भर्तृ ಮುಂತಾದವುಗಳೊಡನೆ ಸಮಾಸವಾಗುತ್ತದೆ. ಉದಾ-देवस्य पूजकः-देवपूजकः, ब्राह्मणयाजकः, राजपरिचारकः, ओदनपरिवेषकः (ಊಟ ಬಡಿಸುವವ) अग्निहोता, भूभर्ता, वेदाध्यापकः ಇತ್ಯಾದಿ.

ಭಾಗವನ್ನು ಸೂಚಿಸುವ पूर्व, अपर, उत्तर, मध्य ಮತ್ತು अर्ध ಪದಗಳು ನಪುಂಸಕದಲ್ಲಿದ್ದು ಒಂದೇ ವಸ್ತುವಿನ ಭಾಗಗಳನ್ನು ಹೇಳುವಾಗ ಅವು षष्ठीतत्पुरुष ಸಮಾಸದ ಪೂರ್ವಪದಗಳಾಗಿ ಬರುತ್ತವೆ. ಆ ವಸ್ತುವಾಚಕವು ಉತ್ತರಪದವಾಗುತ್ತದೆ. ಉದಾ-पूर्वं कायस्य-पूर्वकायः। अपरकायः, अधरदेहः, उत्तरक्षपा, मध्यहस्तः, अर्धकायः, पूर्वाह्णः, अपराह्णः, मध्याह्नः ಇತ್ಯಾದಿ

**7) सप्तमीतत्पुरुषः-** ಸಮಾಸದ ಉತ್ತರಪದವು (शौण्डादिगण) शौण्ड (ನಿಪುಣ), चतुर, प्रवीण, पटु, कुशल ಮುಂತಾದ ನೈಪುಣ್ಯವನ್ನು ಸೂಚಿಸುವ ಪದವಾಗಿದ್ದರೆ ವಿಗ್ರಹವಾಕ್ಯದಲ್ಲಿ ಪೂರ್ವಪದವು ಸಪ್ತಮೀವಿಭಕ್ತಿ ಪಡೆಯುತ್ತದೆ. अक्षेषु (ಜೂಜಾಟದಲ್ಲಿ) शौण्डः-अक्षशौण्डः। ಹೀಗೆಯೇ वाक्चतुरः, कलाप्रवीणः, वाक्पटुः, कर्मकुशलः ಇತ್ಯಾದಿ.

सिद्ध, शुष्क, पक्व, बन्ध, अधीन ಇವುಗಳೊಡನೆ सप्तमीतत्पुरुष ಸಮಾಸವಾಗುತ್ತದೆ. ಉದಾ-वाचि सिद्धः-वाक्सिद्धः। आतपशुष्कः, स्थाल्यां-पक्वः =स्थालीपक्वः, चक्रबन्धः, मन्त्राधीनम्।

**2) अलुक् समासः** - ತತ್ಪುರುಷಸಮಾಸದ ವಿಗ್ರಹವಾಕ್ಯದಲ್ಲಿಯ ಪೂರ್ವಪದದ ವಿಭಕ್ತಿಯು ಸಮಾಸದಲ್ಲಿ ಲೋಪವಾಗದೆ ಉಳಿದರೆ ಅದು ಅಲುಕ್‌ಸಮಾಸ. द्वितीयातत्पुरुष ಬಿಟ್ಟು ಉಳಿದವುಗಳಲ್ಲಿ ಅಲುಕ್ ರೂಪಗಳಿವೆ. ಉದಾ-

1) तृतीयातत्पुरुषः - तरसाकृतम्, अञ्जसाकृतम्, ओजसाकृतम्, जनुषान्धः, आत्मनापञ्चमः।

2) चतुर्थीतत्पुरुषः - परस्मैपदम्, आत्मनेपदम्, आत्मनेभाषा।

3) पञ्चमीतत्पुरुषः - दूरादागतः, अन्तिकादागतः, स्तोकान्मुक्तः, कृच्छ्रान्मुक्तः, अल्पान्मुक्तः।

4) षष्ठीतत्पुरुषः - वाचोयुक्तिः, वाचस्पतिः, दिवस्पतिः, पश्यतोहरः।

5) सप्तमीतत्पुरुषः - युधिस्थिरः=युधिष्ठिरः ಹೀಗೆಯೇ गृहेशूरः, गविष्ठिरः, वने चरति इति वनेचरः, मनसि जायते=मनसिजः,। सरसिजम् ಕೆಲವು ವಿಕಲ್ಪದಿಂದ लुक् (ಲೋಪ) ಆಗಬಹುದು. ಉದಾ-वनचरः, सरोजम्, मनोजः ಇತ್ಯಾದಿ.

**3) नञ्तत्पुरुषसमासः** - ನಿಷೇಧಾರ್ಥವನ್ನು ಸೂಚಿಸುವ न ಅವ್ಯಯವು ಸಮಾಸದಲ್ಲಿ ಪೂರ್ವಪದವಾದರೆ ಅದು नञ्तत्पुरुष ಸಮಾಸವು. नञ् ಅವ್ಯಯವು सादृश्य, अभाव, अन्य, अल्प अप्राशस्त्य ಮತ್ತು विरोध ಹೀಗೆ 6 ಅರ್ಥಗಳಲ್ಲಿದೆ -

तत्सादृश्यमभावश्च तदन्यत्वं तदल्पता।
अप्राशस्त्यं विरोधश्च नयर्थाः षट् प्रकीर्तिताः।

न् ಅವ್ಯಯವು ವ್ಯಂಜನಗಳ ಹಿಂದೆ अ ಎಂದಾಗಿಯೂ ಮತ್ತು ಸ್ವರಗಳ ಹಿಂದೆ अन् ಆಗಿ ಬದಲಾಗುತ್ತದೆ. ಉದಾ-न ब्राह्मणः-अब्राह्मणः, न रजतसदृशं-अरजतम्, पापाभावः-अपापं, अश्वादन्यः-अनश्वः। ज्येष्ठादल्पः-अज्येष्ठः, अप्रशस्तं गृहं-अगृहम्, धर्मविरुद्धः-अधर्मः।

**4) प्रादितत्पुरुषसमासः** - ಈ ಸಮಾಸದಲ್ಲಿ प्र, परा, अप ಮುಂತಾದ ಉಪಸರ್ಗಗಳು ಪೂರ್ವಪದವಾಗಿರುತ್ತವೆ. प्रकर्षेण नीतः-प्रणीतः।सम्यक् मतः-सम्मतः।अनुलक्ष्येण गतः-अनुगतः। दुःखेन जेयः-दुर्जेयः। सुखेन गम्यः-सुगम्यः। विशेषेण नेयः-विनेयः।अतिक्रान्तो मालाम्-अतिमालः।परितः अटनं-पर्यटनम्।अभितः गमनं-अभिगमनम्। आसमन्तात् कर्षणं-आकर्षणम्। दुष्टः जनः-दुर्जनः। अवकृष्टः कोकिलया-अवकोकिलः। निष्क्रान्तः कौशाब्याः-निष्कौशाम्बिः। अपगतो धर्मः-अधर्मः। परागतो जयः-पराजयः। विगतो मार्गः-विमार्गः। ಇದೇ ರೀತಿ कुत्सित

(ದುಷ್ಟ) ಎಂಬ ಅರ್ಥದಲ್ಲಿ कु,कद्,क ಅಥವಾ किं ಎಂಬ ಅವ್ಯಯದಿಂದಲೂ ತತ್ಪುರುಷ ಸಮಾಸವಾಗುತ್ತದೆ. ಉದಾ-कुत्सितः पुरुषः-कुपुरुषः। कुत्सितः सखा-किंसखा। कुत्सितोऽश्वः-कदश्वः, इषत् उष्णं-कोष्णम्। कवोष्णं, कदुष्णम् ಇತ್ಯಾದಿ. ಅಲ್ಲದೆ ಸಂಖ್ಯಾಪೂರ್ವಪದವಿರುವ ತತ್ಪುರುಷ ಸಮಾಸವು ಇರುತ್ತದೆ. ಉದಾ-सप्तऋषिसंज्ञका-सप्तऋषयः, अष्टवसुसंज्ञकाः-अष्टवसवः ಹೀಗೆ नवग्रहाः ಇತ್ಯಾದಿ.

5) **उपपदतत्पुरुषः** - ಉತ್ತರಪದವು ಕೃದಂತವಾಗಿದ್ದಲ್ಲಿ ಈ ಸಮಾಸವಾಗುತ್ತದೆ. ಇದಕ್ಕೆ कृदन्ततत्पुरुष ಎಂದೂ ಹೇಳುತ್ತಾರೆ. ಉದಾ-टीकां करोतीति-टीकाकारः, कुम्भं करोतीति-कुम्भकारः (कुम्भकारः कुम्भकरः कुम्भकृत् कुम्बकस्तथा ಹೀಗೂ ರೂಪಗಳಿವೆ.) धनं ददातीति धनदः, जलदः पयोदः। विद्यां अर्थयतीति विद्यार्थी। एवं धनार्थी, कन्यार्थी, मोक्षार्थी ಮುಂ. पूजां अर्हतीति पूजार्हः। द्वारे तिष्ठतीति द्वारस्थः। निशि चरतीति निशाचरः। सोमं पिबतीति सोमपः। प्रियं वदतीति प्रियंवदः। खे गच्छतीति खगः।भुजैः गच्छतीति भुजगः, एवं जलमुच्, आतपत्रम्-(आतपात् त्रायते इति), शास्त्रलेखी, पद्मभूः। [ಈ ಉದಾಹರಣೆಗಳಲ್ಲಿ ಉತ್ತರಪದಗಳು ಸ್ವತಂತ್ರವಾದ ಕೃದಂತಗಳಲ್ಲವೆಂಬುದು ಗಮನಾರ್ಹ. ಸ್ವತಂತ್ರವಾದ ಕೃದಂತಗಳು ಉತ್ತರಪದವಾಗಿ ಬಂದರೆ उपपदतत्पुरुष ಸಮಾಸವಾಗುವದಿಲ್ಲ. ಉದಾ-पयोधरः- ಇದನ್ನು ಬಿಡಿಸಿದಾಗ धरतीति धरः-पयसां धर-पयोधरः ಎಂದು ಷ.ತತ್. ಸಮಾಸವಾಗುತ್ತದೆ ಹೊರತು पयः धरतीति ಎಂದಾಗುವದಿಲ್ಲ. ಹಾಗೆಯೇ जलधरः, चक्रधरः, मधुसूदनः, कुलभूषणम् ಮುಂತಾದವು ಉಪಪಂ.ತತ್. ಸಮಾಸಗಳಲ್ಲ.]

## II) क र्म धा र य स मा सः

ಈ ಸಮಾಸದ ಪೂರ್ವಪದ ಮತ್ತು ಉತ್ತರಪದಗಳೆರಡೂ ಒಂದೇ ವಿಭಕ್ತಿಯಲ್ಲಿ (ಅಂದರೆ प्रथमाविभक्तिः) ಇರುತ್ತವೆ. ಒಂದೇ ವಿಭಕ್ತಿಯಿರುವ ಪದಗಳಿಂದಾಗಿರುವದಕ್ಕೆ (समान-विभक्तिकपद-घटितः) 'समानाधिकरण' ಎಂದು ಪಾರಿಭಾಷಿಕವಾಗಿ ಹೇಳಲಾಗುತ್ತದೆ. ಈ ಸಮಾಸವು ತತ್ಪುರುಷದ ಪ್ರಭೇದವೂ ಆಗಿದೆ. ಆದ್ದರಿಂದ कर्मधारय ಸಮಾಸಕ್ಕೆ समानाधिकरण-तत्पुरुष ಎಂದೂ ಕರೆಯುವದುಂಟು. ಇದರಲ್ಲಿ 9 ಪ್ರಭೇದಗಳಿವೆ. 1) विशेषणपूर्वपदः, 2) विशेषणोत्तरपदः, 3) विशेषणोभयपदः, 4) उपमानपूर्वपदः, 5) उपमानोत्तरपदः, 6) संभावनापूर्वपदः, 7) अवधारणापूर्वपदः, 8) मध्यमपदलोपी, 9) कृदन्तोभयपदः।

1) **विशेषणपूर्वपदः**- ಯಾವ ಪದವು ವರ್ಣಿಸಲ್ಪಡುತ್ತದೆಯೋ ಅದು विशेष्य। ಇದು ಸಾಮಾನ್ಯವಾಗಿ ದ್ರವ್ಯವಾಚಕವಿರುತ್ತದೆ. ಯಾವ ಪದವು ವರ್ಣಿಸುತ್ತದೆಯೋ ಅದು विशेषण।

ಅದು ಸಾಮಾನ್ಯವಾಗಿ ಗುಣವಾಚಕವಾಗಿರುತ್ತದೆ. ಉದಾ-चतुर-रामः। ಈ ಸಮಾಸದಲ್ಲಿ ಪೂರ್ವಪದವು विशेषणವಾಗಿದ್ದು ಉತ್ತರಪದವು विशेष्यವಾಗಿರುತ್ತದೆ. ಅಂದರೆ ವಿಶೇಷಣ ವಿಶೇಷ್ಯಭಾವವಿರುತ್ತದೆ. ಉದಾ-नीलमेघः-नीलश्चासौ मेघश्च। नीलौ च तौ मेघौ च-नीलमेघौ। [ಇಲ್ಲಿ ಸಾಂಪ್ರದಾಯಿಕವಾಗಿ ಪುಂ.ಸ್ತ್ರೀ.ನ. ಲಿಂಗಗಳಲ್ಲಿ एकवचन, द्विवचन ಮತ್ತು बहुवचनಗಳಲ್ಲಿ ವಿಗ್ರಹವಾಕ್ಯಗಳನ್ನು ರಚಿಸುವ ವಿಧಾನ ಹೀಗಿದೆ - पुल्लिङ्गे-चासौ चतौ चते चेति। स्त्री-चसा चते चताश्चेति। नपुं-चतत् चते चतानीति।] नीलाश्चते मेघाश्च नीलमेघाः। ಇದರಂತೆ ಸ್ತ್ರೀಲಿಂಗದಲ್ಲಿ-बाला च सा लता च बाललता। बाले चते लते च बाललते। बालाश्च ताः लताश्च बाललताः। ನಪುಂಸಕಲಿಂಗ-नीलं च तत् उत्पलं च नीलोत्पलं। नीले चते उत्पले च नीलोत्पले। नीलानि च तानि उत्पलानि च नीलोत्पलानि।

**2) विशेषणोत्तरपदकर्मधारयः**- ಇಲ್ಲಿ ಉತ್ತರಪದವು ವಿಶೇಷಣವಾಗಿರುತ್ತದೆ. वैय्याकरणश्च असौ खसूचिः च वैय्याकरणखसूचिः। ಸೂತ್ರ ನೆನಪು ಮಾಡಿಕೊಳ್ಳಲು ಮೇಲೆ ಆಕಾಶವನ್ನು ನೋಡುವ ವೈಯ್ಯಾಕರಣನು (ಸರಿಯಾದ ಉಪಸ್ಥಿತಿ ಇಲ್ಲದವನು). अन्यः देशः देशान्तरं, अन्या टीका टीकान्तरं, अन्यत् वनं वनान्तरम्। **'अन्तरं'** ಎಂಬುದು ನಿತ್ಯನಪುಂಸಕಲಿಂಗ (अन्तरमवकाशावधिः-अमरः) ಇದು ಬೇರೆ ಎಂಬ ಅರ್ಥದಲ್ಲಿ ಬಳಸಲಾಗುವದು. ಕೊನೆಯಲ್ಲಿ ನ.ಲಿಂ.ದಲ್ಲಿಯೇ ಉಳಿಯುತ್ತದೆ.

पथिन्, राजन्, अहन्, सखिन् (ಮತ್ತು ऋक्, पूः, अप, धूः) ಇವು ಸಮಾಸದ ಉತ್ತರಪದವಾದಾಗ अ ಕಾರಾಂತವಾಗಿ राम ಮುಂತಾದ ಶಬ್ದದಂತೆ ನಡೆಯುತ್ತವೆ. सोपानानां पन्थाः-सोपानपथः। राज्ञां राजा-राजराजः। पुण्यं च तत् अहश्च-पुण्याहं। वायोः सखा-वायुसखः। अर्धर्चः, देवपुरम्, निर्मलापम्, राजधुरम्। **महत्** ಇದು ಪೂರ್ವಪದವಾಗಿ ಸಮಾಸವಾದರೆ महा ಎಂದಾಗುತ್ತದೆ. महान् चासौ राजा च महाराजः। महती च सा नदी च महानदी। महत् च तत् वनं च महावनम्।

**3) विशेषणोभयपदकर्मधारयः**- ಇಲ್ಲಿ ಎರಡೂ ಪದಗಳೂ ವಿಶೇಷಣಗಳೇ ಆಗುತ್ತವೆ. स्थूलः च असौ उन्नतः च स्थूलोन्नतः (पुरुषः) ಹೀಗೆಯೇ शान्तानुकूलः। शीतोष्णम्, राजर्षिः।

**4) उपमानपूर्वपदकर्मधारयः**- ಇಲ್ಲಿ ಪೂರ್ವಪದವು उपमानವಾಗಿದ್ದು ಸಾಧಾರಣಧರ್ಮ(ವಾಚಕ)ವು ಉತ್ತರಪದವಾಗಿರುತ್ತದೆ. मेघः इव श्यामः-मेघश्यामः

(कृष्णः) ಯಾವುದನ್ನು ಹೋಲಿಸುತ್ತೇವೆಯೋ ಅದು उपमेयं-(मुखम्) (object to be compared) ಯಾವುದಕ್ಕೆ ಹೋಲಿಸುತ್ತೇವೆಯೋ ಅದು उपमानम्-(चन्द्रः) (object of comparision) ಇಲ್ಲಿ उपमान-कृष्ण, उपमेय-श्याम, साधारण धर्म (common feature) ಎರಡೂ ಪದಾರ್ಥಗಳು ಕಪ್ಪು. शङ्ख इव पाण्डुरः-शङ्खपाण्डुरः। ಹೀಗೆ चन्द्रमुखम्, विद्युत्चलम्।

**5) उपमानोत्तरपदकर्मधारयः-** ಇಲ್ಲಿ ಉತ್ತರಪದವು ಉಪಮಾನವು, ಪೂರ್ವಪದವು ಉಪಮೇಯವು ಆಗಿರುತ್ತದೆ. नरः सिंहं इव-नरसिंहः। ಹೀಗೆಯೇ वनितालता, मुखकमलम्।

व्याघ्रः, पुंगवः, ऋषभः, कुञ्जरः, सिंहः, शार्दूलः, नागः ಮುಂತಾದ ಪದಗಳು ಉತ್ತರಪದದಲ್ಲಿ ಬಂದರೆ ಶ್ರೇಷ್ಠ ಎಂದು ಅರ್ಥೈಸಬೇಕು. ಈ ಶ್ಲೋಕ ಕಂಠಪಾಠ ಮಾಡಿರಿ.

स्युरुत्तरपदे व्याघ्र पुङ्गवर्षभ कुञ्जराः।
सिंहशार्दूल-नागाद्याः पुंसि श्रेष्ठार्थगोचराः॥ अ.को.

**6) संभावनापूर्वपदकर्मधारयः-** ಇಲ್ಲಿ ಪೂರ್ವಪದವು ಸಾಮಾನ್ಯವಾಗಿ ವ್ಯಕ್ತಿ ಅಥವಾ ಪದಾರ್ಥವನ್ನು (ಹೀಗೆ ಅಥವಾ ಹೆಸರಿನಿಂದ) ತಿಳಿಸುತ್ತದೆ. (संभावना=ಕಾಲ್ಪನಿಕ). ವಿಗ್ರಹವಾಕ್ಯದಲ್ಲಿ इति ಎಂದು ಪೂರ್ವಪದದ ನಂತರ ಬರುತ್ತದೆ. मथुरा इति नगरी-मथुरानगरी। शार्ङ्गमति-धनुः-शार्ङ्गधनुः। मेरुपर्वतः, गङ्गानदी, भासकविः ಮುಂ.

**7) अवधारणापूर्वपदकर्मधारयः-** ಇಲ್ಲಿ 'ಇದೇ ಅದು' ಎಂದು ನಿರ್ಧಾರ (अवधारणा)ದಿಂದ ಹೇಳಲಾಗುವದು. विद्या एव धनं-विद्याधनं ಹೀಗೆ कीर्तिभूषा, मुखचन्द्रः, शोकसागरः।

**8) मध्यमपदलोपीकर्मधारयः-** ವಿಗ್ರಹವಾಕ್ಯದಲ್ಲಿರುವ ಒಂದು ಪೂರ್ಣಪದವೇ ಲೋಪವಾಗುವದು. ಅಂತೆಯೇ मध्यमपदलोपी ಎಂದು ಕರೆಯಲಾಗಿದೆ. शाकप्रियः च असौ पार्थिवः च-शाकपार्थिवः (ಪಲ್ಲೆ ಇಷ್ಟವಿರುವ ರಾಜ) ಇಲ್ಲಿ प्रिय ಎಂಬ ನಡುವಿನ ಪದವು ಲೋಪವಾಗಿದೆ. ಹೀಗೆ देव पूजकः च असौ ब्राह्मणः च-देवब्राह्मणः। शर्करामिश्रं च तत् अन्नं च-शर्करन्नम्। पर्णनिर्मिता कुटी-पर्णकुटी। छायाप्रधानः तरुः-छायातरुः। कल्पप्रदः तरुः-कल्पतरुः।

**9) कृदन्तोभयपदकर्मधारयः-** ಇಲ್ಲಿ ಎರಡು ಕ್ರಿಯೆಗಳನ್ನು (ಒಂದಾದ ಮೇಲೆ ಒಂದು ನಡೆದ) ಸೂಚಿಸುವ ಎರಡು ಕೃದಂತಗಳಿರುತ್ತವೆ. आदौ स्नातः पश्चात् अनुलिप्तः-स्नातानुलिप्तः।आदौ जातः पश्चात् मृतः-जातमृतः।आदौ सुप्तः पश्चात् उत्थितः-सुप्तोत्थितः।

**III) द्वि गु स मा सः**

ಪೂರ್ವಪದವು ಸಂಖ್ಯೆಯಾಗಿರುವ ತತ್ಪುರುಷವಾಗಿದ್ದರೆ ಅದು ದ್ವಿಗುಸಮಾಸ. ಇದು ಸಾಮಾನ್ಯವಾಗಿ ನಪುಂಸಕಲಿಂಗ ಏಕವಚನದಲ್ಲಿದ್ದು (संख्यापूर्वो द्विगुः, द्विगुरेकवचनम्) ಸಮೂಹವನ್ನು ತೋರಿಸುತ್ತದೆ. द्वयोः गवोः समाहारः-द्विगुः। त्रयाणां भुवनानां समाहारः-त्रिभुवनम्। चतुर्णां युगानां समाहारः-चतुर्युगम्। पञ्चानां गवां समाहारः-पञ्चगवम्। षण्णां करिणां समाहारः-षट्करि द्वादशानां धेनूनां समाहारः-द्वादशधेनु।

ಕೆಲವು ಅಕಾರಾಂತವಿರುವ ಪದಗಳು ಇಲ್ಲಿ ई ಕಾರಾಂತವಾಗುತ್ತವೆ. भुवनादि ಪದಗಳು ई ಆಗುವದಿಲ್ಲ. पञ्चानां वटानां समाहारः-पञ्चवटी, ಹೀಗೆಯೇ सप्तपदी, अष्टाध्यायी, शतशती, चतुष्पदी, पञ्चाश्वी।

द्विगुकर्मधारयौ तत्पुरुषप्रभेदौ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

**IV) ब हु व्री हि स मा सः**

ಸಮಾಸದ ಪದಗಳ ಅರ್ಥ ಬಿಟ್ಟು, ಬೇರೊಂದು ಅರ್ಥವನ್ನು ತಿಳಿಸುವಲ್ಲಿ ಈ ಸಮಾಸವಾಗುವದು. (अन्यपदार्थप्रधानो बहुव्रीहिः) नीलकण्ठः ಎಂಬಲ್ಲಿ ನೀಲಿ (नीलः) ಕುತ್ತಿಗೆ (कण्ठः) ಇಷ್ಟೇ ಅರ್ಥವಾಗುತ್ತದೆ. ಈ ಅರ್ಥದಲ್ಲಿ नीलश्चासौ कण्ठश्च ಎಂದು ಕರ್ಮಧಾರಯ ಸಮಾಸವನ್ನು ಮಾಡಬಹುದು. ಆದರೆ ನೀಲಿ ಕುತ್ತಿಗೆ ಇರುವವನು ಯಾವನೋ ಅವನು ಎಂದು, ಸಮಾಸದ ಪದಗಳನ್ನು ಬಿಟ್ಟು, ಮೂರನೇ ಪದವಾದ शिवः ಎಂಬ ಅರ್ಥ ಬರುವ ಹಾಗೆ ಮಾಡುವುದೇ बहुव्रीहिः-(नीलः कण्ठः यस्य सः।) ಹೀಗೆಯೇ चक्रं पाणौ यस्य सः ಎಂಬುದೂ विष्णुः ಎಂಬ ಮೂರನೇ ಪದವನ್ನೇ ಸೂಚಿಸುತ್ತದೆ. ಏನೇ ಆದರೂ अर्थवत् समासः ಎಂಬಂತೆ ಅರ್ಥಕ್ಕನುಸರಿಸಿ ಸಮಾಸ ಮಾಡಬೇಕು. [ ಈ ಹಿನ್ನೆಲೆಯಲ್ಲಿ ಶ್ಲೋಕದ ಸ್ವಾರಸ್ಯ ನೋಡಿರಿ - अहं च त्वं च राजेन्द्र लोकनाथावुभावपि।
बहुव्रीहिरहं राजन् षष्ठीतत्पुरुषो भवान्॥ ]

लोकः (ಜನರೇ) नाथः यस्य (ಒಡೆಯ) ಉಳ್ಳವ = ಭಿಕ್ಷುಕ, लोकस्य नाथः=ರಾಜ

बहुव्रीहि ಸಮಾಸದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು. 1) समानाधिकरण बहुव्रीहिः 2) व्याधिकरण बहुव्रीहिः।

1) समानाधिकरणबहुव्रीहिः-समानाधिकरण ಎಂದರೆ ಒಂದೇ ವಿಭಕ್ತಿಯಲ್ಲಿರುವ ಪದಗಳು (समान-विभक्तिकपदघटितः समानाधिकरणः) ಈ ಸಮಾಸದ ವಿಗ್ರಹವಾಕ್ಯದ ಪದಗಳೂ ಒಂದೇ ವಿಭಕ್ತಿಯಲ್ಲಿರುತ್ತವೆ. ದ್ವಿತೀಯಾ ವಿಭಕ್ತಿಯಿಂದ ಸಪ್ತಮೀ ವಿಭಕ್ತಿಯವರೆಗೆ ಈ ಸಮಾಸ

ಮಾಡಬಹುದು. [ ಏಕಾರ್ಥೀಭಾವ (सामर्थ्य) ಇಲ್ಲದಿರುವುದರಿಂದ ಪ್ರಥಮಾ ವಿಭಕ್ತಿಯಲ್ಲಿ ಬಹುವ್ರೀಹಿ ಇರುವದಿಲ್ಲ.(प्रथमा बहुव्रीहिर्नास्ति असामर्थ्यात् ।)]

**द्वितीयाबहुव्रीहिः**- प्राप्तं उदकं यं सः प्राप्तोदकः (ग्रामः)। **तृ.ब.**- ऊढो रथो येन सः ऊढरथः (अश्वः)। **च.ब.**- दत्तः सूपः यस्मै सः दत्तसूपः (ब्राह्मणः)। **पं.ब.**- निष्क्रान्तः जनः यस्मात् सः निष्क्रान्तजनः (ग्रामः) । **ष.ब.**- पीतं अम्बरं यस्य सः पीताम्बरः (हरिः)। **स.ब.**- महान् निधिः यस्मिन् सः महानिधिः (देशः)। ಇದೇ ರೀತಿ आरूढवानरः, जितकामः, उपहृदबलिः। उद्धृतोदना, (स्थाली) नीलाम्बरः, वीरपुरुषः (देशः) ಮುಂ.

बहुव्रीहि ಸಮಾಸದಲ್ಲಿ अङ्ग गात्रोदर स्तनकण्ठोष्ठदन्तमुखाक्षिकेशाः (स्त्रियां बहुव्रीहावीकारान्ता भवन्ति। ಇದನ್ನು ಕಂಠಪಾಠ ಮಾಡಬೇಕು.) अङ्ग ಇತ್ಯಾದಿಯಾಗಿ केश ದವರೆಗಿನ ಶಬ್ದಗಳು ಸ್ತ್ರೀಲಿಂಗದಲ್ಲಿ ई ಕಾರಾಂತವಾಗುತ್ತವೆ. सुन्दरं अङ्गं यस्याः सा सुन्दराङ्गी। सुष्ठु गात्रं यस्याः सा सुगात्री ಹೀಗೆ शातोदरी, पीवरस्तनी, कम्बुकण्ठी, बिम्बोष्ठी, सुदती, चन्द्रमुखी, इन्दीवराक्षी, कुटिलकेशीत्यादयः। ಇವುಗಳನ್ನು ಬಿಟ್ಟು ಉಳಿದ ಅಂಗವಾಚಕ ಶಬ್ದಗಳು ಸ್ತ್ರೀಲಿಂಗ ವಿಶೇಷಣವಾಗಿದ್ದರೂ आ ಕಾರಾಂತವಾಗುತ್ತವೆ. ಉದಾ- चारुदेहा, नीलालका, वृत्तकुचा, कुन्दरदना ಇತ್ಯಾದಿ.

ಈ ಕೆಳಗಿನ 9 ಶಬ್ದಗಳು ಸ್ತ್ರೀಲಿಂಗ ವಿಶೇಷಣವಾಗಿದ್ದರೂ ವಿಗ್ರಹ ವಾಕ್ಯದಲ್ಲಿ ई ಕಾರಾಂತವಾಗುತ್ತವೆ. उरु गुरु पृथु लघु बहु पटु रुजु मृदु चारु शब्दानां स्त्रीलिङ्ग-विशेषणत्वेऽपि ईकारान्तत्वमेव (ಇದನ್ನು ಕಂಠಪಾಠ ಮಾಡಬೇಕು.) उर्वीविद्या, गुर्वीमतिः, पृथ्वीशाला, लघ्वीभाषा, बह्वीसेना, पट्वीबुद्धिः, रज्वीरज्जुः, मृद्वीद्राक्षा, चार्वीमूर्तिः।

**व्यधिकरणपदबहुव्रीहिः**- ಇಲ್ಲಿ ವಿಗ್ರಹವಾಕ್ಯದ ಪದಗಳು ಭಿನ್ನ ಭಿನ್ನ ವಿಭಕ್ತಿಗಳಲ್ಲಿರುತ್ತವೆ. (भिन्न भिन्न विभक्ति-पदघटितो व्यधिकरणः) चक्रं पाणौ यस्य सः-चक्रपाणिः। मनुष्यात् जन्म यस्य सः मनुष्यजन्मा (ಕುಬೇರ) खड्गः हस्ते यस्य सः खड्गहस्तः। चन्द्रः चूडायां यस्य सः-चन्द्रचूडः। ಬಹುವ್ರೀಹಿ ಸಮಾಸದ ಕೆಲವು ಇತರ ಪ್ರಕಾರಗಳು- 1) बहुपदबहुव्रीहिः 2) उपमानपूर्वपदबहुव्रीहिः 3) अवधारणापूर्वपदबहुव्रीहिः 4) मध्यमपदलोपिबहुव्रीहिः 5) नैञ्बहुव्रीहिः 6) प्रादिबहुव्रीहिः 7) संख्याबहुव्रीहिः 8) सहबहुव्रीहिः 9) दिगन्तराललक्षणः 10) व्यतिहारलक्षणः 11) अलुक्बहुव्रीहिः।

**1) बहुपदबहुव्रीहिः-** ಈ ಸಮಾಸದಲ್ಲಿ ಸಾಮಾನ್ಯವಾಗಿ ಮೂರು ಪದಗಳಿರುತ್ತವೆ. ವಿಗ್ರಹವಾಕ್ಯಗಳಲ್ಲಿ ದ್ವಿತೀಯಾದಿಂದ ಸಪ್ತಮೀಯವರೆಗೆ ವಿಭಕ್ತಿಗಳು ಬರಬಹುದು. गतः क्रुद्धः सिहः यं सः-गतक्रुद्धसिंहः। अर्जिता विख्याता संपत् येन सः-अर्जितविख्यातसंपत्।प्रदत्ताः सुन्दराः अश्वाः यस्मै सः-प्रदत्तसुन्दराश्वः।संपादित भूरिधनं यस्मात् तत्-संपादित-भूरिधनं चातुर्यम्। नीलं उज्वलं वपुः यस्य सः-नीलोज्वलवपुः (कृष्णः)।खड्गिनः, कुण्डलिनः, वीराः यस्मिन् तत् खड्गिकुण्डलिवीरं (सैन्यम्)।

**2) उपमानपूर्वपदबहुव्रीहिः-** ಇಲ್ಲಿ ಪೂರ್ವಪದವು ಉಪಮಾನ, ಉತ್ತರ ಪದವು ಉಪಮೇಯವಾಗಿರುತ್ತವೆ. पद्मे इव नेत्रे यस्य सः-पद्मनेत्रः। ಹೀಗೆಯೇ कमलाननः, चन्द्रानना, अरविन्दलोचना-अरविन्दे इव लोचने यस्याः सा।

**3) अवधारणापूर्वपदबहुव्रीहिः-** यशः एव धनं यस्य सः-यशोधनः। ಹೀಗೆಯೇ तपोधनः, विद्याभूषणः, कमलासनः। ಇಲ್ಲಿ ನಿಶ್ಚಯ (अवधारणा)ವು एव ಕಾರದಿಂದ ಸೂಚಿಸಲಾಗಿದೆ.

**4) मध्यमपदलोपिबहुव्रीहिः-** ಇಲ್ಲಿಯೂ ಕರ್ಮಧಾರಯ ಸಮಾಸದಂತೆ ಮಧ್ಯಮ ಪದ ಲೋಪವಾಗುತ್ತದೆ.वृकस्य उदरं इव उदरं यस्य सः वृकोदरः। हरिणस्य अक्षिणी इव अक्षिणी यस्याः सा हरिणाक्षी।ಹೀಗೆಯೇ गजाननः, मेघनादः, सिंहकटिः।

**5) नञ्बहुव्रीहिः-** ಇದು नञ्तत्पुरुष ಸಮಾಸದಂತೆಯೇ ಆದರೆ ಅನ್ಯಪದಾರ್ಥ ಪ್ರಧಾನವಾಗಿರುತ್ತದೆ. अविद्यमानः पुत्रः यस्य सः-अपुत्रः (अविद्यमानपुत्रः) न विद्यते अन्तः यस्य सः-अनन्तः ಹೀಗೆಯೇ अनादिः, अजरः।

**6) प्रादिबहुव्रीहिः-** ಇದು प्रादितत्पुरुषದಂತೆಯೇ ಆದರೆ ಅನ್ಯಪದವು ಗಮ್ಯವಾಗಿರುತ್ತದೆ. निर्गतं भयं यस्मात् सः निर्भयः।अवनतं मुखं यस्य सः अवमुखः।प्रकृष्टं बलं यस्य सः-प्रबलः। विगतः धवः (ಪತಿ) यस्याः सा-विधवा। अतिशयितं बलं यस्य सः अतिबलः।अभिगतं मुखं यस्य सः-अभिमुखः।ಹೀಗೆಯೇ निर्दयः, निर्लोभः,निर्जरः,। सुष्ठु हृदयं यस्य सः सुहृत्। दुष्टं हृदयं यस्य सः-दुर्हृत्। (ಮಿತ್ರ ಮತ್ತು ಶತ್ರು ಎಂಬರ್ಥದಲ್ಲಿ ಹೃದಯ ಪದದ ಹಿಂದೆ सु ಮತ್ತು दुस् ಇವು ಬಂದರೆ हृत् ಎಂದಾಗುತ್ತದೆ.) प्र ಉಪಸರ್ಗದ ಮುಂದಿನ जानु ज्ञु ಆಗುತ್ತದೆ. प्रगते जानुनी यस्य सः प्रज्ञुः। ऊर्ध्वं ಉಪಪದದ ಮುಂದೆ जानु ಬಂದರೆ ऊर्ध्वज्ञुः ಅಥವಾ ऊर्ध्वजानुः ಎಂದಾಗುತ್ತದೆ.

................................ प्रज्ञुः प्रगतजानुकः।
ऊर्ध्वज्ञुरूर्ध्वजानुःस्यात् संज्ञुः संहत जानुकः॥ - अ.को.

7) **संख्याबहुव्रीहिः** - ಇದರಲ್ಲಿ ಎರಡು ವಿಧ - 1)संख्योत्तरपदः 2) संख्योभयपदः। ಸಂಖ್ಯೋತ್ತರಪದ ಬಹುವ್ರೀಹಿಯಲ್ಲಿ ಉತ್ತರಪದವು ಸಂಖ್ಯಾವಾಚಕವಿದ್ದು ಪೂರ್ವಪದವಾಗಿ उप, आसन्न, अधिक ಮುಂತಾದವುಗಳು ಇರುತ್ತವೆ. दशानां समीपे ये सन्ति ते-उपदशाः। (ಹತ್ತಕ್ಕೆ ಸಮೀಪದಲ್ಲಿರುವ 9 ಅಥವಾ 11) आसन्नाः विंशतेः आसन्नविंशाः। चत्वारिंशतः अधिकः-अधिकचत्वारिंशः। ಸಂಖ್ಯೋಭಯಪದದಲ್ಲಿ ಎರಡೂ ಪದಗಳು ಸಂಖ್ಯಾವಾಚಕವಿದ್ದು वा ಶಬ್ದದಿಂದ ವಿಗ್ರಹವಾಕ್ಯ ಮಾಡುತ್ತಾರೆ. द्वौ वा त्रयो वा द्वित्राः। त्रयो वा चत्वारो वा त्रिचतुराः। पञ्च वा षट्-पञ्चषाः।

8) **सहबहुव्रीहिः** - ಪೂರ್ವಪದವು सह ಅಥವಾ स ಇದ್ದು ನಾಮಪದವು ತೃತೀಯಾ ವಿಭಕ್ತಿ ತೆಗೆದುಕೊಳ್ಳುತ್ತದೆ. पुत्रेण सह वर्तते इति सपुत्रः। सभार्यः, सकामः, सशिष्यः ಇತ್ಯಾದಿ. समानं उदरं यस्य सः सहोदरः ಅಥವಾ सोदरः (ಸಮಾನಾರ್ಥಕದಲ್ಲಿ ತೃತೀಯಾ ಇಲ್ಲ.)

9) **दिगन्तराललक्षणबहुव्रीहिः** - ಇಲ್ಲಿ ಉಪದಿಕ್ಕುಗಳನ್ನು ಸೂಚಿಸಲಾಗುವದು-दक्षिणस्याः च पूर्वस्याः च दिशोर्यदन्तरालं सा दक्षिणपूर्वा। (ಆಗ್ನೇಯ) प्रतीच्याः च दक्षिणस्याः च दिशोर्यदन्तरालम् सा प्रत्यग्दक्षिणा (ನೈರುತ್ಯ) ಹೀಗೆ उत्तरपूर्वा, प्रत्यगुत्तरा।

10) **व्यतिहारलक्षणबहुव्रीहिः** - ಇಲ್ಲಿ ಯುದ್ಧ ನಡೆಯುವಲ್ಲಿಯ ಸಾಧನವನ್ನು ಸೂಚಿಸಲಾಗುವದು. केशेषु केशेषु गृहीत्वा इदं प्रवर्तते इति केशाकेशि (युद्धम्) दण्डैः च दण्डैः च प्रहृत्य प्रवर्तत इति दण्डादण्डि (युद्धम्) ಹೀಗೆಯೇ मुसलामुसलि, शूलाशूलि ಇತ್ಯಾದಿ.

11) **अलुक्बहुव्रीहिः** - अलुक् तत्पुरुष ದಂತೆ ಪೂರ್ವಪದದ ವಿಭಕ್ತಿ ಲೋಪವಾಗುವದಿಲ್ಲ. उरसि लोमानि यस्य सः उरसिलोमा। कण्ठे कालः यस्य सः कण्ठेकालः। ಹೀಗೆಯೇ सुकेशीभार्यः, शोभनाकान्ता ಇವು अलुक्ದಂತೆಯೇ.

बहुव्रीहि ಸಮಾಸದಲ್ಲಿಯ ಕೆಲವು ವಿಶೇಷ ಅಂಶಗಳು -

1) ಸಮಾಸದ ಕೊನೆಯಲ್ಲಿ ಬಂದ जाया ಪದವು जानि ಎಂದಾಗುತ್ತದೆ. जानकी जाया यस्य सः-जानकीजानिः। ಹೀಗೆಯೇ राधाजानिः, भवानीजानिः, श्रीजानिः।

2) उद्, पूति, सु, सुरभि ಇವುಗಳ ಮುಂದಿನ गन्ध ಪದವು गन्धि ಆಗುತ್ತದೆ. पूतिः गन्धः यस्य सः पूतिगन्धिः (ದುರ್ಗಂಧ)। उद्गतः गन्धः यस्य सः उद्गन्धिः। ಹೀಗೆಯೇ सुगन्धिः, सुरभिगन्धिः।

3) ಸು ಮತ್ತು ಸಂಖ್ಯಾವಾಚಕ ಪದಗಳ ಮುಂದಿನ पाद ಪದವು पाद् ಆಗುತ್ತದೆ. शोभनौ पादौ यस्य सः-सुपाद्। द्वौ पादौ यस्य सः-द्विपादौ। चत्वारः पादाः यस्य सः-चतुष्पाद्। ಆದರೆ पाद ದ ಹಿಂದಿನ ಪದವು ಉಪಮಾವಾಚಕವಾಗಿದ್ದರೆ ವಿಕಲ್ಪವಾಗಿ पादः ಎಂದಾಗುವದು. व्याघ्रस्य पादः इव पादः यस्य सः व्याघ्रपादः ಅಥವಾ व्याघ्रपाद्।

4) प्रजा ಮತ್ತು मेधा ಇವು ಉತ್ತರಪದಗಳಾಗಿದ್ದರೆ प्रजस् ಮತ್ತು मेधस् ಆಗುತ್ತವೆ. शोभनाः प्रजाः यस्य सः-सुप्रजाः। शोभना मेधा यस्य सः-सुमेधाः।

5) सक्थि, अक्षि, नाभि ಶಬ್ದಗಳು ಉತ್ತರಪದಗಳಾದರೆ सक्थ, अक्ष, नभ ಎಂದಾಗುತ್ತವೆ. दीर्घे सक्थिनी (ऊरू) यस्य सः दीर्घसक्थः। पुण्डरीकवत् अक्षिणी यस्य सः पुण्डरीकाक्षः। पद्मः नाभौ यस्य सः पद्मनाभः।

6) ಸ್ತ್ರೀಲಿಂಗದ ಬಹುವ್ರೀಹಿ ಸಮಾಸದಲ್ಲಿ ಉತ್ತರಪದದ ಕೊನೆಗೆ इन् ಇದ್ದರೆ न् ಲೋಪವಾಗಿ क ಬರುವದು. बहवः दण्डिनः यस्या सा बहुदण्डिका (नगरी) ಹೀಗೆ बहुवाग्मिका (सभा)

7) उरस्, सर्पिः, उपानह्, दधि, मधु, शालि, पुंस्, अनडुह्, पयस् नौ ಮತ್ತು लक्ष्मी ಇವು ಉತ್ತರಪದಗಳಾಗಿ ಏಕವಚನದಲ್ಲಿದ್ದರೆ क ಪ್ರತ್ಯಯ ಬರುತ್ತದೆ. व्यूढः(ಉಬ್ಬಿದ) उरः यस्य सः-व्यूढोरस्कः। प्रियं सर्पिः यस्य सः-प्रियसर्पिष्कः। द्वौ उपानहौ यस्य सः द्युपानत्कः। प्रियं दधि यस्य सः-प्रियदधिकः। ಹೀಗೆಯೇ प्रियमधुकः, बहुशालिकः, मधुरपयस्कः, दृष्टनौकः, प्राप्तलक्ष्मीकः।

8) धनुस् ಮತ್ತು धर्म ಇವು ಉತ್ತರಪದವಾದಲ್ಲಿ धन्वा ಮತ್ತು धर्मा ಎಂದಾಗುತ್ತವೆ. शार्ङ्ग धनुः यस्य सः शार्ङ्गधन्वा। समानः धर्मः यस्य सः-समानधर्मा।

9) ಉತ್ತರಪದದ ಕೊನೆಗೆ ई,ऊ,ऋ ಸ್ವರಗಳಿದ್ದರೆ 'क' ಪ್ರತ್ಯಯ ಬರುತ್ತದೆ. बहुनदीकः देशः, हृष्टवधूकः, मृतभर्तृका ಇತ್ಯಾದಿ.

## V) द्वन्द्व समासः

ಈ ಸಮಾಸದಲ್ಲಿ ಎಲ್ಲ ಪದಗಳು ಪ್ರಧಾನವಾಗಿದ್ದು (उभयपदार्थप्रधानो द्वन्द्वः) ಅವು 'ಮತ್ತು' ಎಂಬ ಅರ್ಥದಿಂದ ಕೂಡಿರುತ್ತವೆ (चार्थे द्वन्द्वः). ವಿಗ್ರಹವಾಕ್ಯದಲ್ಲಿ 'च' ಎಂಬ ಅವ್ಯಯದಿಂದ ಅದನ್ನು ಸೂಚಿಸಲಾಗುವದು. ಉದಾ-रामः च कृष्णः च-रामकृष्णौ। द्वन्द्व ಸಮಾಸವು ಮೂರು ವಿಧ 1) इतरेतरद्वन्द्व 2) समाहार ಮತ್ತು 3) एकशेष.

1) **इतरेतरद्वन्द्वः** - ಈ ಸಮಾಸದ ಪದಗಳು ಪ್ರತ್ಯೇಕವಾದ ಮಹತ್ತ್ವವನ್ನು ಪಡೆದಿರುತ್ತವೆ. रमा च राधा च -रमाराधे ಎಂಬಲ್ಲಿ ರಮೆಯು ಮತ್ತು ರಾಧೆಯು ಇಬ್ಬರೂ ಪ್ರತ್ಯೇಕವಾಗಿ ತಿಳಿಯಲ್ಪಟ್ಟು, ಸಮಾನವಾದ ಪ್ರಾಧಾನ್ಯತೆಯನ್ನು ಹೊಂದಿರುತ್ತಾರೆ. ಈ ಸಮಾಸವು ಎರಡು ಪದಗಳು (द्विपद) ಸೇರಿದಾಗ ಕೊನೆಯ ಶಬ್ದದ (ಲಿಂಗದ) ದ್ವಿವಚನದಲ್ಲಿಯೂ ಅನೇಕ ಪದಗಳು ಸೇರಿದಾಗ (बहुपद) ಕೊನೆಯ ಶಬ್ದದ (ಲಿಂಗದ) ಬಹುವಚನದಲ್ಲಿಯೂ ಇರುತ್ತದೆ. ಉದಾ-देवः च असुरः च देवासुरौ। घटः च पटः च कुसूलं (ಕಣಜ) च शाला च-घटपटकुसूलशालाः। ಹೀಗೆಯೇ हरिहरौ, गन्धपुष्पाक्षतफलानि, धर्मार्थकाममोक्षाः, ज्ञानवैराग्ये, शिशिरवसन्तौ, ब्रह्मविष्णुमहेश्वराः, आयुरारोग्यैश्वर्याणि।

2) **समाहारद्वन्द्वः**- ಈ ಸಮಾಸದಲ್ಲಿರುವ ಪದಗಳಿಗೆ ಪ್ರತ್ಯೇಕ ಅರ್ಥವು ಗೌಣವಾಗಿದ್ದು ಸಾಮೂಹಿಕಾರ್ಥವೇ ಪ್ರಧಾನವಾಗಿರುತ್ತದೆ. ಈ ಸಮಾಸವು ಯಾವಾಗಲೂ ಏಕವಚನದಲ್ಲಿಯೇ ಮತ್ತು ನಪುಂಸಕಲಿಂಗದಲ್ಲಿಯೇ ಇರುತ್ತದೆ. ಉದಾ-धर्मः च अर्थः च कामः च मोक्षः च-धर्मार्थकाममोक्षम्। ಇಲ್ಲಿ धर्म, अर्थ ಇತ್ಯಾದಿಗಳು ಪ್ರತ್ಯೇಕ ಎಂಬ ಅರ್ಥವಾಗದೇ ಅವುಗಳ ಸಮೂಹ पुरुषार्थः ಎಂಬ ಸಾಮೂಹಿಕ ಅರ್ಥ ಬರುತ್ತದೆ. ಪ್ರತ್ಯೇಕವಾಗಿ धर्मः, अर्थः ಇತ್ಯಾದಿ ಬೇರೆ ಬೇರೆ ಅಥವಾ ಸ್ವತಂತ್ರವಾದ ಅಂಶಗಳು ಎಂದು ಸೂಚಿಸಬೇಕಾಗಿದ್ದರೆ धर्मार्थकाममोक्षाः ಎಂದು इतरेतरद्वन्द्व ಸಮಾಸ ಮಾಡಬೇಕು.

3) **समाहारद्वन्द्वः**- ಇದನ್ನು ಸಾಮಾನ್ಯವಾಗಿ ಈ ಕೆಳಗಿನ ಅಂಶಗಳಲ್ಲಿ ಬಳಸಲಾಗುತ್ತದೆ. 1) ದೇಹದ ಅವಯವಗಳು, 2) ವಾದ್ಯನುಡಿಸುವವರು, 3) ಸೈನ್ಯದ ಭಾಗಗಳು, 4) ಪಶುಪಕ್ಷಿಗಳು, 5) ಕ್ರಿಮಿಕೀಟಗಳು, 6) ಆಜನ್ಮವೈರಿಗಳು ಇತ್ಯಾದಿ. पाणी च पादौ च एषां समाहारः-पाणिपादम्। ಹೀಗೆ मांसशोणितम्, मार्दङ्गिकाश्च पाणविकाश्च एतेषां समाहारः-मार्दङ्गिकपाणविकम्। रथिकाश्च अश्वारोहाश्च गजस्थाश्च एषां समाहारः-रथिकाश्वारोहगजस्थम्। शुकाश्च पिकाश्च एषां समाहारः-शुकपिकम्। मशकाश्च मत्कुणाश्च (ತಿಗಣೆ) एषां समाहारः-मशकमत्कुणम्। अहिश्च नकुलश्च अनयोः समाहारः-अहिनकुलम्। ಹೀಗೆಯೇ गवाश्वम्, पुत्रपौत्रम्, दासीदासम्, गोव्याघ्रम्, यूकालिक्षम् (ಹೇನು), विदर्भकलिङ्गम्, गङ्गासिन्धु ಇತ್ಯಾದಿ. ಇವುಗಳಿಗೆ नित्यसमाहारद्वन्द्व ಎಂದೂ ಅನ್ನುವರು. समाहारद्वन्द्वसमासದ ಕೊನೆಗೆ च् ವರ್ಗದ ವ್ಯಂಜನಗಳು, द्, ष ಅಥವಾ ह ವ್ಯಂಜನ ಇದ್ದರೆ ಅವುಗಳಿಗೆ अ ಸೇರಿ ವಿಭಕ್ತಿಪ್ರತ್ಯಯವು ಕೂಡುತ್ತದೆ. ಉದಾ-वाक् च त्वक् च अनयोः समाहारः-वाक्त्वचम्। (ಇಲ್ಲಿ त्वक् ಶಬ್ದದ ಮೂಲರೂಪ त्वच् ಎಂದಿದೆ.) ಹಾಗೆಯೇ त्वक्स्रजम्, सम्पद्विपदम्, छत्रोपानहम् ಇತ್ಯಾದಿ.

**4) एकशेषद्वन्द्वसमासः**- (द्वन्द्वापवादक-एकशेषः) ಇಲ್ಲಿ ಒಂದೇ ಪದವು ಉಳಿಯುತ್ತದೆ. ಯಾವಪದವೆಂಬುದಕ್ಕೆ ಕೆಲವು ನಿಯಮಗಳಿವೆ. 1) ಪದಗಳು ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳಿದ್ದರೆ ಪುಲ್ಲಿಂಗದ ಪದವು ಉಳಿಯುತ್ತದೆ. 2) ಪು.ಸ್ತ್ರೀ. ಮತ್ತು ನ.ಲಿಂಗಗಳಿದ್ದರೆ ನ.ಲಿಂಗದ ಪದವು ಉಳಿಯುತ್ತದೆ. ಸಾಮಾನ್ಯವಾಗಿ ಈ ಸಮಾಸವು ಒಂದೇ ಜಾತಿಯ ಸ್ತ್ರೀ-ಪುರುಷವಾಚಕ ಪದಗಳಿಂದ ಉಂಟಾಗುತ್ತದೆ. ಉದಾ-पुत्रः च पुत्री च-पुत्रौ। सा च स च-तौ, भ्रातरः च स्वसारः च-भ्रातरः।

ರಕ್ತಸಂಬಂಧ ಅಥವಾ ವಿದ್ಯಾಸಂಬಂಧವನ್ನು ತೋರಿಸುವ ಋ ಕಾರಾಂತ ಪದಗಳು ಸೇರಿ ಅಥವಾ ಋ ಕಾರಾಂತ ಪದವು ಪುತ್ರ ಪದದೊಡನೆ ಸೇರಿ ದ್ವಂದ್ವಸಮಾಸವಾದಾಗ ಹಿಂದಿನ ಋ ಕಾರಾಂತ ಪದಗಳು ಆ ಕಾರಾಂತವಾಗುತ್ತವೆ. ಉದಾ-माता च पिता च-पितरौ ಅಥವಾ मातापितरौ (ಅಥವಾ मातरपितरौ, ಆದರೆ मातृपितरौ ಎಂದಾಗುವದಿಲ್ಲ.) ಹೀಗೆಯೇ होतापोतारौ, पितापुत्रौ, मातादुहितरौ ಇನ್ನೂ ಕೆಲವು ದ್ವನ್ದ್ವಸಮಾಸದ ಉದಾಹರಣೆಗಳು- जाया च पतिश्च-जायापती ಅಥವಾ जम्पती, (दम्पती जम्पती जायापती भार्यापती च तौ-अ.कोशः) द्यौश्च पृथिवी च-द्यावापृथिवी, दिवस्पृथिव्यौ। स्त्री च पुमान च-स्त्रीपुंसौ। धेनुश्च अनडुहा (अनड्वान्) च धेन्वनडुहौ। नक्तं च दिवा च-नक्तंदिवम्। अहश्च रात्रिश्च-अहोरात्रम्। अहश्च निशा च अहर्निशम्। अहनि च दिवा च-अहर्दिवम्। ಈ ಕೆಳಗಿನ ಶ್ಲೋಕ ಕಂಠಪಾಠ ಮಾಡಿರಿ.

माता पितरौ पितरौ मातरपितरौ प्रसूचनयितारौ।
श्वश्रूः श्वशुरः श्वशुरौ पुत्रौ पुत्रश्च दुहिता च ॥ अ.को.

## VI) अ व्य यी भा व - स मा सः

ಪೂರ್ವಪದವು ಪ್ರಮುಖವಾಗಿದ್ದರೆ ಅದು ಅವ್ಯಯೀಭಾವಸಮಾಸ. (पूर्वपदप्रधानोऽव्ययीभावः). ಇಲ್ಲಿ ಎರಡು ತರಹದ ಪೂರ್ವಪದಗಳು- 1) ಅವ್ಯಯ ಪೂರ್ವಪದ 2) ನಾಮಪದ ಪೂರ್ವಪದ. ಸಮಾಸವಾದ ಮೇಲೆ ಅದು ಅವ್ಯಯವಾಗಿ ನಪುಂಸಕಲಿಂಗದ ಪ್ರಥಮಾ ವಿಭಕ್ತಿ ಏಕವಚನದಲ್ಲಿರುತ್ತದೆ. (नपुंसकमव्ययीभावः). ಸಾಮಾನ್ಯವಾಗಿ ಅವ್ಯಯೀಭಾವಸಮಾಸವಾದದ್ದು ವಾಕ್ಯದಲ್ಲಿ ಕ್ರಿಯಾವಿಶೇಷಣವೆಂದೂ ಕೆಲವು ಸಲ ಅರ್ಥಾಂತರದಲ್ಲಿಯೂ ಬಳಸಲಾಗುತ್ತದೆ. ಉದಾ - निर्दयं ताडयति, उपकूपं पतितः। (ಬಾವಿಯ ಹತ್ತಿರ ಬಿದ್ದನು).

ಈ ಸಮಾಸವು ಮುಖ್ಯವಾಗಿ ಎರಡು ವಿಧ - 1) ಅವ್ಯಯವು ಪೂರ್ವಪದದಲ್ಲಿರುವದು (अव्ययपूर्वपदम्) ಮತ್ತು 2) ನಾಮಪದವು ಮೊದಲಿದ್ದು ನಂತರ ಅವ್ಯಯವಿರುವಂತಹದು

(नामपूर्वपदम्). ಉದಾ - अनुरूपम् = रूपस्य योग्यम्. ಇಲ್ಲಿ अनु ಯೋಗ್ಯ ಎಂಬ ಅರ್ಥದಲ್ಲಿದೆ. वृक्षोपरि = वृक्षस्य उपरि ಇಲ್ಲಿ वृक्ष - ನಾಮಪದ ಮೊದಲಿದೆ.

ಅವ್ಯಯೀಭಾವಸಮಾಸವು ಕೆಳಗಿನಂತೆ ಅನೇಕ ಅರ್ಥಗಳಲ್ಲಿ ಉಪಯೋಗಿಸಲಾಗುವದು.

1) ವಿಭಕ್ತಿ - अधिहरि = हरौ इति - (ಹರಿಯಲ್ಲಿ ಸಕಲ ಕಲ್ಯಾಣಗುಣಗಳಿವೆ)

2) ಸಮೀಪ - उपगङ्गम् = गङ्गायाः समीपम्, ಹೀಗೆಯೇ उपकूपं, उपनगरं ಮುಂ.

3) ಸಮೃದ್ಧಿ - सुवङ्गम् = वङ्गानां समृद्धिः - (ವಂಗದೇಶದ ಸಮೃದ್ಧಿ) ಹೀಗೇ सुजनम् ಮುಂ.

4) ದುರವಸ್ಥೆ - यवनानां व्यृद्धिः = दुर्यवनम् - ಯವನರ ದುರವಸ್ಥೆ.

5) ಅಭಾವ - मक्षिकाणां अभावः = निर्मक्षिकम्. ಹೀಗೆ निर्जनम् ಮುಂ.

6) ನಾಶ (अत्यय) ಅಥವಾ ಸಮಾಪ್ತಿ-हिमस्य अत्ययः = अतिहिमम् - ಹಿಮದ ಸಮಾಪ್ತಿ

7) ಪ್ರಸಂಗಕ್ಕೆ ಸರಿಯಿಲ್ಲದ್ದು (असंप्रति)- निद्रा संप्रति न युज्यते इति = अनिद्रम्

8) ಸಾದೃಶ್ಯ - हरेः सादृश्यं = सहरि - ಹೀಗೇ सचन्द्रं ಮುಂ.

9) ಯೋಗ್ಯ - अनुरूपं = रूपस्य योग्यम् - ಹೀಗೆ अनुगुणं, अनुवंशं ಮುಂ.

10) ಪುನರಾವರ್ತಿ-(वीप्सा) पदे पदे = प्रतिपदम् - ಹೀಗೆ प्रतिदिनं, प्रत्यहं ಮುಂ.

11) ಮೀರದೆ - (अनतिक्रम) क्रमं अनतिक्रम्य वर्तत इति यथा-क्रमम् ಹೀಗೇ यथाशक्ति, यथामति, यथाविधि ಮುಂ.

12) ಅನುಕ್ರಮವಾಗಿ-(आनुपूर्वी) ज्येष्ठस्य आनुपूर्व्येण - अनुज्येष्ठम्। ಹೀಗೆ अनुक्रमम्।

13) ಜೊತೆಜೊತೆಗೆ ಅಥವಾ ಸಮಕಾಲ - (यौगपद्य) चक्रेण युगपत् = सचक्रम् - ಹೀಗೇ सरथम्।

14) ಪೂರ್ಣ-(साकल्य) तृणमप्यपरित्यज्य = सतृणम् (ಹುಲ್ಲನ್ನೂ ಬಿಡದೆ)

15) ಕೊನೆಯವರೆಗೆ - (पर्यन्त) अग्निग्रन्थपर्यन्तं = साग्नि - ಹೀಗೇ सटीकम्।

ಇನ್ನು ಬೇರೆ ಉದಾಹರಣೆಗಳು - गङ्गायाः पारे-पारेगङ्गम्, समुद्रस्य मध्ये-मध्येसमुद्रम्। गङ्गां अन्वायतम् - अनुगङ्गम्। (ಗಂಗೆಯ ದಂಡೆಯಗುಂಟ) अक्ष्णोः परम्-परोक्षम्। अक्ष्णोः प्रति-प्रत्यक्षम्। अग्निं अभि-अभ्यग्नि (ಅಗ್ನಿಯ ಕಡೆಗೆ) समुद्रात् आ - आसमुद्रम् ಹಾಗೆಯೇ आजन्म, आमूलं, आवैकुण्ठम्, आमुक्ति, आमरणम्, आबालम् ಮುಂ. वनात् बहिः-बहिर्वनम्। यावन्तः श्लोकाः तावन्तः, यावच्छ्लोकम्। शाकस्य मात्रा-शाकप्रति। इति अव्ययीभावः।

- - -

## ವಿಶಿಷ್ಟ ಸಮಾಸಗಳು

I 1) मत्वर्थ प्रत्ययान्तसमासः - बुद्धिरस्यास्तीति बुद्धिमान्, हनुरस्यास्तीति (ಗದ್ದ) हनुमान् ಹೀಗೆ पापीयान्, पापवान्, धनवान् ಮುಂ.

2) णिन् प्रत्ययान्तः-करः अस्यास्ति इति करी (ಆನೆ) । एवं पुत्री, यशस्वी।

3) च्वि प्रत्ययान्तः (अभूततद्भावे च्विः) ಮೊದಲು ಹಾಗೆ ಇರದೇ ಇದ್ದದ್ದು ನಂತರ ಹಾಗಾಗಿದೆ - अपयोधराः पयोधरा इव संपद्यमानीभूताः पयोधरीभूताः। अजडाः जडत्वेन संपद्यमानीकृताः जडीकृताः। पयोधरीभूतचतुःसमुद्रां। जडीकृतः त्र्यम्बकवीक्षणेन (रघुवंशः, सर्ग-2)

4) इतच् प्रत्ययान्तः - कोरकाः (ಮೊಗ್ಗೆ) अस्य संजाताः कोरकितो वृक्षः। तारकाः अस्य संजाताः तारकितं नभः।

5) तद्धितप्रत्ययान्तः - दशरथस्य अपत्यं पुमान् दाशरथिः। एवं काश्यपिः, वासुदेवः। पर्वतस्य अपत्यं स्त्री पार्वती। एवं जानकी, द्रौपदी। कलिङ्गानां राजा कालिङ्गः। रघोः गोत्रापत्यं पुमान् राघवः। एवं यादवः, कौरवः। तस्य इदं तदीयम्। तव इयं त्वदीया, मम इयं मदीया।

6) भावप्रत्ययान्तः - गुरोः भावः गुरुत्वम्। शुचेर्भावः-शुचिता। ब्रह्मणो भावः ब्रह्मत्वं। देवस्य भावः देवभूयम्।

7) कृत्प्रत्ययान्तः-शं (ಕಲ್ಯಾಣ) अस्मात् भवतीति शंभुः। पद्मात् भवतीति पद्मभूः। शास्त्रं लिखतीति शास्त्रलेखी। खे गच्छतीति खगः। करोतीति कृत् कश्च। आतपात् त्रायते इति आतपत्रं। विद्यामर्थयतीति विद्यार्थी। एवं कन्यार्थी, मोक्षार्थी, धनार्थीत्यादयः। ಇವು ಉಪಪದ ಸಮಾಸದಲ್ಲಿಯೂ ಇವೆ.

II) पृषोदरादिसमासः - पृषत् उदरं यस्य सः पृषोदरः। हंसति इति हंसः। हिनस्ति इति सिंहः। शवानां शयनं अत्र इति श्मशानम्। पिशितं (ಮಾಂಸ) आचमति इति पिशाचः। मनसः ईषा मनीषा। मह्यां रौति इति मयूरः।

III) नित्यसमासाः - ಇವು ವಿಗ್ರಹವಾಕ್ಯವಿಲ್ಲದೆ ಯಾವಾಗಲೂ ಸಮಾಸಗಳೇ. जमदग्निः, धृष्टद्युम्नः, जयद्रथः, काकतालीयम्, कृष्णसर्पः।

IV) ಕೆಲವು ಸಮಾಸಗಳಲ್ಲಿ ಪೂರ್ವೋತ್ತರ ಪದಗಳು ಹಿಂದುಮುಂದೆ ಆಗುತ್ತವೆ. पूर्वं श्रुतं-श्रुतपूर्वम्, पूर्वं भूतः-भूतपूर्वः।

(ಇನ್ನೂ ಅನೇಕ ಪ್ರಕಾರದ ವಿಶಿಷ್ಟ ಸಮಾಸಗಳಿವೆ.)

ಗಮನಿಸಿರಿ :

रामं लक्ष्मण पूर्वजं रघुवरं सीतापतिं सुन्दरं
काकुत्स्थं करुणार्णवं गुणनिधिं विप्रप्रियं धार्मिकम्।
राजेन्द्रं सत्यसन्धं दशरथतनयं शामलं शान्तमूर्तिं
वन्दे लोकाभिरामं रघुकुलतिलकं राघवं रावणारिम्॥

सन्नद्धः कवची खड्गी चापबाणधरो युवा।
गच्छन् मनोरथोऽस्माकं रामःपातु सलक्ष्मणः॥
रामो दाशरथिः शूरो लक्ष्मणानुचरो बली।
काकुत्स्थः पुरुषः पूर्णः कौसल्येयो रघूत्तमः॥
वेदान्त-वेद्यो यज्ञेशः पुराणपुरुषोत्तमः।
जानकी-वल्लभः श्रीमानप्रमेय-पराक्रमः॥

भोगे रोगभयं-सुखे क्षयभयं वित्तेषु भूभृद्भयं
दासे स्वामिभयं जये रिपुभयं वंशे कुयोषिद् भयम्।
माने म्लानिभयं गुणे खलभयं काये कृतान्ताद् भयं
सर्वं नाम भयास्पदं भगवतो विष्णोः पदं निर्भयम्॥

सत्यज्ञाननिधिं जगद्धितकरं संशीति-संहारकं
योगारूढमतिप्रसन्न-मनसं शान्तं दयासागरम्।
सद्विद्याप्रतिपादकं नतजनं धीरं जगन्ममङ्गलम्
वन्दे सत्पथदर्शकं गुरुवरं संसार-सन्तारकम्॥

लभ्यते सकला सम्पत् सर्वथा श्रमजीविना
नश्यते सकला सम्पत् क्रमशो दीर्घसूत्रिणा॥

कौसल्येयो दृशौ पातु विश्वामित्रप्रियः श्रुती
घ्राणंपातु मखत्राता मुखं सौमित्रि वत्सलः।
जिह्वां विद्यानिधिः पातु कण्ठं भरतवन्दितः
स्कन्धौ दिव्यायुधः पातु भुजौ भग्नेशकार्मुकः॥



## ಅಧ್ಯಾಯ ೧೫

# ನ್ಯಾಯ, ಅಲಂಕಾರ ಮತ್ತು ವೃತ್ತಗಳು

## ನ್ಯಾಯಗಳು (IDIOMS)

ಒಂದು ಸಂದರ್ಭದಲ್ಲಿ ನಡೆದ ಘಟನೆಯಿಂದ ಒಂದು ನಾಣ್ಣುಡಿಯಂತಹ ನುಡಿ ಉಂಟಾಗಿ ವಾಕ್ಯಗಳಲ್ಲಿ ಅವುಗಳ ಬಳಕೆಯಿಂದ ವಿಶಿಷ್ಟ ಅರ್ಥ ಉಂಟುಮಾಡಲು ಶಕ್ಯವಾಗುತ್ತದೆ. ಅಂತಹ ಸಾರನುಡಿಗೆ ಸಂಸ್ಕೃತದಲ್ಲಿ न्याय ಎಂದು ಕರೆಯುತ್ತಾರೆ. ಇವುಗಳ ಬಳಕೆಯಿಂದ ಸಂದರ್ಭದ ಕಸುವನ್ನು ಹೆಚ್ಚಿಸಬಹುದು. ಉದಾ-ಎರಡು ಆಕಸ್ಮಿಕ ಘಟನೆಗಳು ನಡೆದಾಗ ಎರಡಕ್ಕೂ ಸಂಬಂಧ ಕೂಡಿಸಿದರೆ ಅದಕ್ಕೆ काकतालीयन्याय ಎನ್ನುವರು. ಕಾಗೆ ಕೂಡುವದಕ್ಕೂ ಟೊಂಗೆ ಮುರಿಯುವದಕ್ಕೂ ಚಾಟಿ ಎಂಬಂತೆ. तस्याः मिलनं काकतालीयन्याय इवाभवत्। ಇಬ್ಬರ ಜಗಳದಲ್ಲಿ ಇಬ್ಬರಿಗೂ ಸರಿಯಾಗುವಂತೆ ಅಥವಾ ಒಬ್ಬರಿಗೂ ಸರಿಯಾಗದ ನಿರ್ಣಯ ಕೊಟ್ಟರೆ ಅದು ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಇದ देहलीदीपन्याय ಎನ್ನಬಹುದು. (ಹೊಸ್ತಿಲಮೇಲೆ ದೀಪ).

ಹೀಗೆ ಈ ಕೆಳಗಿನ ನ್ಯಾಯಗಳನ್ನು ಆಯಾ ಸಂದರ್ಭದಲ್ಲಿ ಬಳಸಬಹುದು

1) अन्धपंगुन्यायः - ಕುರುಡ ಮತ್ತು ಕುಂಟ ಕೂಡಿ ಕಾರ್ಯಸಾಧಿಸುವಂತೆ
2) अन्धगजन्याय - ಕುರುಡರು ಆನೆಯನ್ನು ಪರಾಮರ್ಶಿಸಿದಂತೆ
3) अन्धपरम्परा - ಒಬ್ಬ ಕುರುಡ ಇನ್ನೊಬ್ಬ ಕುರುಡನನ್ನು ಅನುಸರಿಸಿ ಹೋಗುವದು
4) अरण्यरोदन - ಅಡವಿಯಲ್ಲಿ ಅತ್ತಂತೆ ನಿಷ್ಫಲ
5) अरण्यपुष्प - ಅಡವಿಯಲ್ಲಿಯ ಹೂ ಪ್ರಸಿದ್ಧಿ ಪಡೆಯುವದಿಲ್ಲ
6) अर्धजरतीन्याय - ಮುದುಕಿ ಒಂದು ತತ್ತಿಯಲ್ಲಿ ಅರ್ಧ ಅಡಿಗೆಗೆ, ಅರ್ಧ ಮರಿ ಉಂಟಾಗಲು ಬಳಸಿದಳು (ಅರ್ಧ ವಿಶ್ವಾಸ)
7) अशोकवनिका - ಸೀತೆಯನ್ನು ಅಶೋಕವನದಲ್ಲಿಯೇ ಏಕೆ ಇಟ್ಟ-ಎಲ್ಲಿ ಇಟ್ಟರೂ ಈ ಪ್ರಶ್ನೆ
8) एकवृन्तफलद्वय - ಒಂದು ತುಂಬು ಎರಡು ಹಣ್ಣು-ಒಂದು ಸಾಧನ ಎರಡು ಕಾರ್ಯಸಿದ್ಧಿ
9) कण्ठचामीकर - ಕೊರಳಲ್ಲಿ ಸರ ಇಟ್ಟು, ಊರೆಲ್ಲ ಹುಡುಕುವದು
10) काकाक्षिगोलक - ಒಂದು ಕಣ್ಣು ಎರಡು ಗುಡ್ಡಿ - ಎರಡೂ ಕಡೆಗೆ ಅನ್ವಯ
11) काकदन्दगणना - ಕಾಗೆಹಲ್ಲು ಎಣಿಸುವದು - ನಿರರ್ಥಕ ವಿಚಾರ
12) काञ्चनमणि - ಬಂಗಾರಕ್ಕೆ ರತ್ನ ಸೇರಿಸಿದಂತೆ
13) कूपमण्डूक - ಬಾವಿಯಲ್ಲಿಯ ಕಪ್ಪೆ - ಸಂಕುಚಿತ ವಿಚಾರ
14) कूपखनन - ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡುವದು

15) कैमुतिक - ಒಂದಕ್ಕೆ ಇಷ್ಟು ನಾಲ್ಕಕ್ಕೆ ಎಷ್ಟಾಗಬಾರದು ಮುಂತಾದಾಗಿ ವಿಚಾರಿಸುವದು
16) क्षते क्षार - ಗಾಯದಲ್ಲಿ ಉಪ್ಪು ಹಾಕಿದಂತೆ, ಜ್ವಾಲೆಯಲ್ಲಿ ತುಪ್ಪ ಸುರಿದಂತೆ
17) खले कपोत - ಕಣದಲ್ಲಿಯ ಕಾಳುಗಳನ್ನು ಪಾರಿವಾಳಗಳ ಹಿಂಡು ಒಮ್ಮೆಲೆ ಬಂದು ಹಾರಿಸಿಕೊಂಡು ಹೋಗುವಂತೆ
18) गतानुगतिक - ಒಬ್ಬ ಹೊರಟಲ್ಲಿ ಎಲ್ಲರೂ ಹೋಗುವದು - ಒಂದು ಕುರಿ ಒದರಿದರೆ ಎಲ್ಲವು ಹಾಗೆ
19) गुणोपसंहार - ಗುಣಗಳನ್ನಷ್ಟೇ ಸ್ವೀಕರಿಸುವದು
20) गुडजिह्विका - ಕಹಿ ಓಷಧಕ್ಕೆ ಬೆಲ್ಲ ಹಚ್ಚುವದು
21) घटप्रदीप - ಕೊಡದಲ್ಲಿ ದೀಪವಿಟ್ಟಂತೆ ಸಂಕುಚಿತ
22) घट्टकुटीप्रभात - ಟೋಲನಾಕಾದ ಕರ ತಪ್ಪಿಸಲು ರಾತ್ರಿ ಬೇರೆ ದಾರಿಯಿಂದ ಹೋಗಿ ಮುಂಜಾನೆ ಮತ್ತೆ ಅಲ್ಲಿಗೆ ಬರುವಂತೆ
23) घुणाक्षर - ಗೆದ್ದಲಿ ತಿಂದದ್ದು ಹಾಳಿಯ ಮೇಲೆ ಅಕಸ್ಮಾತ್ ಅಕ್ಷರದಂತಿರುವುದು - ಅಕಸ್ಮಾತ್ ಸರಿ ಇರುವಿಕೆ
24) चित्रपट - ಮಡಚಿದ ಚಿತ್ರವಿರುವ ಬಟ್ಟೆಯನ್ನು ಬಿಚ್ಚಿದಾಗ ಎಲ್ಲವೂ ಸರಿಯಾಗಿ ಕಾಣುವಂತೆ
25) तप्तचामीकर - ಪುಟಕ್ಕೆ ಹಾಕಿದ ಬಂಗಾರದಂತೆ ಕಷ್ಟಗಳನ್ನು ದಾಟಿ ಯಶಸ್ವಿ ಆದ
26) तुष्यतु दुर्जन - ದುಷ್ಟರು ಮೊದಲು ಸಂತುಷ್ಟರಾಗಲು ಬಿಡಬೇಕು.
27) देहलीदीप - ಹೊಸ್ತಿಲ ಮೇಲೆ ದೀಪವಿಟ್ಟಂತೆ - ಎರಡೂ ಬದಿ ಬೆಳಕು, ಒಂದಕ್ಕೂ ಸರಿ ಬೆಳಕು ಇಲ್ಲ
28) दग्धपट - ಸುಟ್ಟು ಹೋದ ಅರಿಬೆಯಂತೆ ಸತ್ವವಿಲ್ಲದ್ದು - ಜೀವನ್ಮುಕ್ತನ ಸ್ಥಿತಿ ಹೀಗೆ
29) नीरक्षीर - ಹಾಲು ನೀರಿನಲ್ಲಿ ಹಾಲನ್ನೇ ತೆಗೆದುಕೊ - ಗುಣಗಳನ್ನೇ ಎಣಿಸುವದು ಇದನ್ನೇ हंसक्षीरन्याय ಎನ್ನುತ್ತಾರೆ
30) परस्परदीप - ಒಂದು ದೀಪ ನೋಡಲು ಇನ್ನೊಂದು ಬೇಕಿಲ್ಲ
31) पङ्कप्रक्षालन - ಕೆಸರು ತುಳಿದು ತೊಳೆಯುವದಕ್ಕಿಂತ ಕೆಸರು ತುಳಿಯದೇ ಇರುವದು ಲೇಸು
32) प्रधानमल्लनिबर्हण - ಒಂದು ಗುಂಪಿನ ನಾಯಕ ಸೋತರೆ ಆ ಗುಂಪೇ ಸೋತಂತೆ
33) बीजाङ्कुर - ಬೀಜ ಮೊದಲೋ ಗಿಡ ಮೊದಲೋ - ನಿರ್ಣಯಿಸುವದು ಕಠಿಣ
34) पादप्रसारण - ಮಳೆಯಲ್ಲಿ ಆಶ್ರಯಕ್ಕೆ ಬಂದ ಭಿಕ್ಷು ಸಾವಕಾಶ ಕಾಲು ಚಾಚುತ್ತ ಮನೆಯನ್ನು ವ್ಯಾಪಿಸುವದು
35) मण्डूकतोलन - ಕಪ್ಪೆ ತೂಕ ಮಾಡುವದು
36) मण्डूकप्लुति - ಕಪ್ಪೆ ಜಿಗಿಯುವದು ಮಧ್ಯದಲ್ಲಿಯ ವ್ಯಕ್ತಿಯನ್ನು ಬಿಟ್ಟು ಬಿಡುವದು

37) मध्यगिण्ड - ಸಾಕ್ಷಾತ್ ಕೆಲಸಕ್ಕೆ ಮಧ್ಯವರ್ತಿ ವ್ಯಕ್ತಿ - (ಚಮಚಾ)
38) मध्यमणि - ಸರದಲ್ಲಿ ನಡುವಿನ ಪದಕ - ಎರಡು ಪಕ್ಷಕ್ಕೂ ಸಂಬಂಧ
39) रज्युसर्प - ಹಗ್ಗದ ಮೇಲೆ ಹಾವು ಕಾಣುವಂತೆ ಭ್ರಮಾತ್ಮಕ ಜ್ಞಾನ
40) राजपुत्रव्याध - ರಾಜಪುತ್ರನು ಬೇಡರ ಗುಂಪಿನಲ್ಲಿ ಬೆಳೆದು ತನ್ನತನದ ಅರಿವಿಲ್ಲದೆ ಅವರಂತೆ ಇರುವನು. ನಂತರ ಅರಿವು - ಜೀವನ್ಮುಕ್ತನಿಗೆ ಈ ದೃಷ್ಟಾಂತ ಕೊಡುವರು
41) वीचीतरङ्ग - ಸಣ್ಣ ತೆರೆ ಹಂತ ಹಂತವಾಗಿ ದೊಡ್ಡ ತೆರೆಯಾಗುವದು - ವಸ್ತು ಒಬ್ಬರ ಕೈಯಿಂದ ಒಬ್ಬರಿಗೆ ಮುಟ್ಟುವದು
42) शते पञ्चाशत् - ನೂರರಲ್ಲಿ ಐವತ್ತು ಬಂದಂತೆ ಹಿರಿಯರು ಬಂದರೆ ಚಿಕ್ಕವರು ಬಂದಂತೆ
43) शाखाचन्द्र (स्थूलारुन्धती) - ಗಿಡದ ಟೊಂಗೆಯ ತುದಿ ತೋರಿಸಿ ಚಂದ್ರನನ್ನು ತೋರಿಸುವದು - ಮೊದಲು ಸ್ಥೂಲ ನಂತರ ಸೂಕ್ಷ್ಮ (ಸಾಕಾರದಿಂದ ನಿರಾಕಾರಕ್ಕೆ)
44) शुक्तिरजत - ಸಿಂಪು ಬಿಸಿಲಿಗೆ ಬೆಳ್ಳಿಯಂತೆ ಕಾಣುವದು - ಸಾದೃಶ್ಯದಿಂದ ಭ್ರಮ
45) समुद्रवृष्टि - ಸಮುದ್ರದಲ್ಲಿಯೇ ಮಳೆ ಸುರಿಯುವದು - ಶ್ರೀಮಂತರಿಗೆ ಹಣ ಕೊಡುವದು
46) सिंहावलोकन - ಸಿಂಹವು ಗಂಭೀರವಾಗಿ ದೂರ ಹೋಗಿ ಒಮ್ಮೆ ಹಿಂದೆ ನೋಡುವಂತೆ
47) सिकतासेतु - ಉಸುಕಿನಿಂದ ಸೇತು ಕಟ್ಟಿದಂತೆ - ನಿರರ್ಥಕ
48) सूचीकटाह - ದೊಡ್ಡ ಪಾತ್ರೆ ಮಾಡುವಾಗ ಸಣ್ಣ ತಂತಿ ಸರಿಮಾಡಿ ಕೊಡುವದು - ದೊಡ್ಡ ಕೆಲಸದಲ್ಲಿ ಚಿಕ್ಕ ಚಿಕ್ಕ ಕೆಲಸ ಮಾಡಿ ಕೊಡುವದು
49) स्थालीपुलाक - ಒಂದು ಅಗಳು ನೋಡಿ ಉಳಿದದ್ದು ಅನ್ನ ಆಗಿದೆ ಎಂದು ತಿಳಿಯುವದು
50) स्थूणानिखनन - ಖಂಬ ಸರಿ ನಿಂತಿದೆಯೋ ಇಲ್ಲವೋ ಎಂದು ಅಲುಗಾಡಿಸಿ ಮತ್ತೆ ಗಟ್ಟಿ ಮಾಡುವದು
51) हस्तामलक - ಅಂಗೈಯಲ್ಲಿ ನೆಲ್ಲೀಕಾಯಿ ಸ್ಪಷ್ಟ ಕಾಣುವಂತೆ

ಇದೇ ರೀತಿ **ನಾ ಣ್ಣು ಡಿ ಗ ಳು** (ಆಭಾಣಕಗಳು **PROVERBS**) ಇವೆ.

1) अतिथिस्तु गृहे देवः - ಮನೆಗೆ ಬಂದ ಅತಿಥಿಯು ದೇವರು
2) आचारः प्रथमो धर्मः - ಸದಾಚಾರವೇ ಶ್ರೇಷ್ಠ ಧರ್ಮ
3) इतो व्याघ्रः इतः तटी - ಇತ್ತ ದರಿ ಅತ್ತ ಪುಲಿ
4) कालो हि दुरतिक्रमः - ದೈವವನ್ನು ಮೀರಲು ಸಾಧ್ಯವಿಲ್ಲ
5) क्रोधो मूलमनर्थानां - ಕ್ರೋಧವು ಅನರ್ಥಗಳಿಗೆ ಮೂಲ ಕಾರಣ
6) धैर्य सर्वत्र साधनम् - ಧೈರ್ಯವು ಎಲ್ಲೆಡೆಗೆ ಶ್ರೇಷ್ಠ ಸಾಧನ
7) त्रैलोक्य दीपको धर्मः - ಧರ್ಮವು ಮೂರೂ ಲೋಕಗಳನ್ನು ಬೆಳಗಿಸುವ ದೀಪ

8) न वित्तेन तर्पणीयो मनुष्यः - ಮನುಷ್ಯನಿಗೆ ಎಷ್ಟು ಹಣವಿದ್ದರೂ ತೃಪ್ತಿಯೇ ಇಲ್ಲ
9) न अहंकारसमो रिपुः - ಅಹಂಕಾರಕ್ಕಿಂತ ದೊಡ್ಡ ಶತ್ರು ಇಲ್ಲ
10) नास्ति भार्यासमं मित्रम् - ಹೆಂಡತಿಗಿಂದ ಶ್ರೇಷ್ಠ ಗೆಳೆಯನಿಲ್ಲ
11) पापाय परपीडनम् - ಕಾಯಿಕ ವಾಚಿಕ ಮಾನಸಿಕ ಹಿಂಸೆ ಕೊಡುವದು ದೊಡ್ಡ ಪಾಪ
12) पित्रोः सेवा महत् तपः - ತಂದೆ ತಾಯಿಗಳ ಸೇವೆಯು ದೊಡ್ಡ ತಪಸ್ಸು
13) बिन्दुभिः पूर्यते घटः - ಹನಿ ಹನಿ ಕೂಡಿ ಹಳ್ಳ
14) यथा राजा तथा प्रजाः - ಹಿರಿಯರ ಆಚರಣೆಯನ್ನು ಚಿಕ್ಕವರು ಅನುಸರಿಸುವರು
15) लोको भिन्नरुचिः - ಜನರ ಸ್ವಭಾವ ಭಿನ್ನ ಭಿನ್ನ
16) विषकुम्भं पयोमुखं - ಮೇಲೆ ಝಗಾಝಗಾ ಒಳಗೆ ಭಗಾಭಗಾ
17) विद्यया अमृतमश्नुते - ವಿದ್ಯೆಯಿಂದ ಅಮೃತತತ್ವ ಸಿಗುತ್ತದೆ
18) शरीरमाद्यं खलु धर्मसाधनम् - ಆರೋಗ್ಯವೇ ಭಾಗ್ಯ
19) श्रमे लक्ष्मीः प्रतिष्ठिता - ಕೈ ಕೆಸರಾದರೆ ಬಾಯಿ ಮೊಸರು
20) शीर्षे सर्पः देशान्तरे वैद्यः - ತಲೆಯ ಮೇಲೆ ಹಾವು ವೈದ್ಯ ದೇಶಾಂತರದಲ್ಲಿ
21) सत्येनैव जितः सर्गः - ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ
22) सौजन्येन जितं जगत् - ಸೌಜನ್ಯದಿಂದ ಜಗತ್ತು ಗೆಲ್ಲಬಹುದು
23) संपूर्णकुम्भो न करोति शब्दम् - ತುಂಬಿದ ಕೊಡ ತುಳುಕುವುದಿಲ್ಲ
24) हस्ते कङ्कणे किं दर्पणेन - ಅಂಗೈ ಹುಣ್ಣಿಗೆ ಕನ್ನಡಿ ಏಕೆ
25) हुतं च दत्तं च तथैव तिष्ठति - ಹವನ ಮತ್ತು ದಾನ ಮಾಡಿದ ಫಲ ನಿಶ್ಚಿತ

## ಅ ಲ ಂ ಕಾ ರ ಗ ಳು (FIGURES OF SPEECH)

वाक्यं रसात्मकं काव्यं। रमणीयार्थप्रतिपादकः शब्दः काव्यम्। रीतिरात्मा काव्यस्य। तददोषौ शब्दार्थो सगुणौ - काव्यम्। काव्यस्यात्मा रसः, काव्यस्यात्मा ध्वनिः ಇತ್ಯಾದಿಯಾಗಿ ಅನೇಕರು ಕಾವ್ಯದ ಲಕ್ಷಣಗಳನ್ನು ಹೇಳಿದ್ದಾರೆ. वक्रोक्तिः काव्यजीवितम् ಎಂಬಂತೆ (चमत्कृति जनकत्वं) ಚಮತ್ಕಾರವನ್ನುಂಟು ಮಾಡುವುದೇ ಕಾವ್ಯ ಎನ್ನಬಹುದು. ಇಂತಹ ಕಾವ್ಯದ ಸೌಂದರ್ಯ ಹೆಚ್ಚಿಸುವದಕ್ಕೆ ಅಲಂಕಾರಗಳ ಸಹಯೋಗವನ್ನು ಹೇಳುತ್ತಾರೆ. ಅಲಂಕಾರಗಳಿಂದ ಕಾವ್ಯಕ್ಕೆ ಹೆಚ್ಚಿನ ಮೆರಗು ಉಂಟಾಗುವದೆಂಬಲ್ಲಿ ಎರಡು ಮಾತಿಲ್ಲ. सद्यः परनिर्वृतिः (ತತ್‌ಕ್ಷಣದಲ್ಲಿ ಆನಂದದ ಆಸ್ವಾದನೆ ಕೊಡುವಂತಹದು) ಎಂಬುದು ಕಾವ್ಯದ ಪರಮಪ್ರಯೋಜನ. ಇದನ್ನೇ ब्रह्मानन्दसहोदर ಎಂದೂ ಹೇಳಲಾಗಿದೆ. ಈ ಆನಂದವನ್ನು ತರುವಲ್ಲಿ ಅಲಂಕಾರಗಳಿಗೂ ಗಮನಾರ್ಹ ಪಾತ್ರವಿದೆ ಎನ್ನಬಹುದು.

1) ಉಪಮಾಲಂಕಾರವು ಈ ಕ್ಷೇತ್ರದಲ್ಲಿ ಬಹುಭಾಗವನ್ನು ವ್ಯಾಪಿಸಿದೆ. ಯಾವುದಕ್ಕೆ ಹೋಲಿಸಬೇಕಾಗಿದೆಯೋ ಅದು उपमान (ಅಧಿಕಗುಣ) ಯಾವುದನ್ನು ಹೋಲಿಸಬೇಕಾಗಿದೆಯೋ ಅದು उपमेयः (ನ್ಯೂನಗುಣ) (उपमानं हि चन्द्रः स्यादुपमेयं मुखं भवेत्) ಹೀಗೆ ಉಪಮಾನೋಪಮೇಯಗಳಲ್ಲಿ ಸಾದೃಶ್ಯದ ಸೌಂದರ್ಯವಿದ್ದಲ್ಲಿ ಅದು ಉಪಮಾಲಂಕಾರ. (ಉಪಮಾವಾಚಕ ಶಬ್ದ इव, यथा, वत् ಇವು ಇರಬೇಕು.)

उपमा यत्र सादृश्यलक्ष्मीरुल्लसति द्वयोः।
हंसीव कृष्ण ते कीर्तिः स्वर्गङ्गामवगाहते॥

(ಹಂಸದಂತೆ ಹೇ ಕೃಷ್ಣನೇ ನಿನ್ನ ಕೀರ್ತಿಯು ಸಗ್ಗದ ಗಂಗೆಯಲ್ಲಿ ಮೀಯಲು ಹೋಗಿದೆ.)

ಇಲ್ಲಿ ಹಂಸವು ಉಪಮಾನ, ಕೀರ್ತಿಯು ಉಪಮೇಯ. ಕೀರ್ತಿಯು ಶುಭ್ರ, ಹಂಸವೂ ಕೂಡ ಶುಭ್ರಮನೋಹರ. ಅದು ಸ್ವರ್ಗಕ್ಕೆ ಹೋಗುತ್ತದೆ ಕೀರ್ತಿಯೂ ಪಸರಿಸಿದೆ, ಹೀಗೆ ಸಾದೃಶ್ಯ. ಇಲ್ಲಿ इव ಎಂಬ ಉಪಮಾವಾಚಕದಿಂದಲೇ ಉಪಮಾ ಎಂಬುದು ಸ್ಪಷ್ಟ. (ಉಪಮಾಲಂಕಾರದಲ್ಲಿ ಅನೇಕ ಭೇದಗಳಿವೆ.)

2) **रूपकम्** - तद्रूपकमभेदोयमुपमानोपमेययोः - ಉಪಮಾವಾಚಕ ಶಬ್ದವಿಲ್ಲದೇ ಉಪಮಾನೋಪಮೇಯಗಳಲ್ಲಿ ಅಭೇದದ ಚಮತ್ಕಾರವನ್ನು ಹೇಳಿದಲ್ಲಿ ಅದು ರೂಪಕ. आनन्दसागरे मग्नः। संसारसागरः, मुखचन्द्रः ಮುಂ.

3) **उत्प्रेक्षा** - संभावनमथोत्प्रेक्षा प्रकृतस्य समेन यत् - ಸುಂದರವಾದ ಕಲ್ಪನೆ ತೋರಿದಲ್ಲಿ ಉತ್ಪ್ರೇಕ್ಷಾ. ಕೆಳಗಿನ ಶಬ್ದಗಳು ಉತ್ಪ್ರೇಕ್ಷೆಯನ್ನು ಸೂಚಿಸುತ್ತವೆ.

शङ्के मन्ये ध्रुवं चैव नूनमित्यपि वा भवेत्।
उत्प्रेक्षा व्यज्यते यत्र इवशब्दोऽपि तादृशः॥
उल्लसत्सु कुमुदेषु षट्पदाः संपदन्ति परितो हिमांशुना।
भिद्यमान-तमसो नभस्थलात् विच्युता इव तमिस्र बिन्दवः॥

ಚಂದ್ರೋದಯದಿಂದ ಅರಳಿದ ಕುಮುದಗಳಿಗೆ ಎಲ್ಲೆಡೆಯಿಂದ ದುಂಬಿಗಳು ಬಂದು ಬೀಳುತ್ತಲಿದ್ದವು. ಆ ಕರಿದಾದ ದುಂಬಿಗಳು ಚಂದ್ರನಿಂದ ಕತ್ತರಿಸಲಾದ ಕತ್ತಲೆಯ ಚೂರಗಳೆ ಕೆಳಗೆ ಬೀಳುತ್ತಿರುವಂತೆ ಕಂಡವು.

4) **अतिशयोक्तिः**-विवक्षाया विशेषस्य लोकसीमातिवर्तिनी।

ಲೋಕದಲ್ಲಿ ಅಸಂಭವವಿರುವಂತಹ ವರ್ಣನೆ - सौधाग्राणि पुरस्यास्य स्पृशन्ति विधुमण्डलम्। - ಈ ಸೌಧದ ತುದಿಗಳು ಚಂದ್ರಮಂಡಲವನ್ನು ಮುಟ್ಟುತ್ತವೆ. (ಇದು ಅಸಂಭವ)

5) **दृष्टान्तालंकारः**-चेद्बिम्ब-प्रतिबिम्बत्वं दृष्टान्तस्तदलंकृतिः। त्वमेव कीर्तिमान् राजन्, विधुरेव हि कान्तिमान् - ಬಿಂಬಪ್ರತಿಬಿಂಬ ಭಾವ ಇದ್ದಲ್ಲಿ ದೃಷ್ಟಾಂತಾಲಂಕಾರವಿರುತ್ತದೆ. ರಾಜನೇ ನೀನೇ ಕೀರ್ತಿವಂತನಾದವನು, ಚಂದ್ರನೇ ಕಾಂತಿಯುಳ್ಳವನಾದವನು. ಒಂದು ರೀತಿಯ ಬಿಂಬಪ್ರತಿಬಿಂಬದ ಚಮತ್ಕಾರವನ್ನು ಕಾಣಬಹುದು.

6) **निदर्शना**-वाक्यार्थयोः सदृशयोः ऐक्यारोपो निदर्शना। क्वसूर्य प्रभावो वंशः क्वचाल्पविषया मतिः। तितीर्षुः दुस्तरं मोहात् उडुपेनास्मि सागरं। ಸಮಾನವಾದ ವಾಕ್ಯಾರ್ಥಗಳಲ್ಲಿ ಐಕ್ಯವನ್ನು ಆರೋಪ ಮಾಡುವದು ಅಥವಾ ಸಂಬಂಧವಿಲ್ಲದಿದ್ದರೂ ಸಾಮ್ಯ ಹೇಳುವದು. ಸೂರ್ಯವಂಶ ಎಲ್ಲಿ ನಾನೆಲ್ಲಿ, ನಾವಿನಿಂದ ಸಮುದ್ರ ದಾಟಲು ಹೊರಟಂತೆ.

7) **व्यतिरेकः** - व्यतिरेको विशेषश्चेदुपमानोपमेययोः। शैला इवोन्नताः सन्तः किन्तु प्रकृतिकोमलाः- ಉಪಮಾನಕ್ಕಿಂತ ಉಪಮೇಯದಲ್ಲಿ ವಿಶೇಷವನ್ನು ತೋರಿಸುವದು. ಸಂತರು ಪರ್ವತದಷ್ಟು ಎತ್ತರ. ಆದರೆ ಸ್ವಭಾವದಿಂದ ಮೃದು.

8) अनन्वयः- उपमानोपमेयत्वं यदेकस्यैव वस्तुनः।
गगनं गगनाकारं सागरः सागरोपमः।

ಉಪಮಾನೋಪಮೇಯಗಳಲ್ಲಿ ಒಂದೇ ವಸ್ತು ಇರುವುದು. ಸಾಗರ ಸಾಗರದಂತಿದೆ. ಆಕಾಶ ಆಕಾಶದಂತಿದೆ. ರಾಮರಾವಣರ ಯುದ್ಧ ಅವರ ಯುದ್ಧದಂತಿದೆ.

9) **अर्थान्तरन्यासः**- उक्तिरर्थान्तरन्यासःस्यात् सामान्य विशेषयोः। हनुमानब्धिमतरत् दुष्करं किं महात्मनाम्। ವಿಶೇಷವನ್ನು ಹೇಳಿ ಸಾಮಾನ್ಯ ನಿಯಮ ಹೇಳುವದು. ಹನುಮಂತ ಸಾಗರವನ್ನು ದಾಟಿದ. ಮಹಾತ್ಮರಿಗೆ ಯಾವುದು ಅಸಾಧ್ಯ?

10) **श्लेषः** - नानार्थसंश्रयः श्लेषो वर्ण्यावर्ण्योभयाश्रितः।
सर्वदोमाधवः पायात् स योऽगं गामदीधरत्।

ಉಪಮಾನೋಪಮೇಯಗಳಲ್ಲಿ ಬೇರೆ ಬೇರೆ ಅರ್ಥ ಹೇಳುವದು.
ಎಲ್ಲವನ್ನು ಕೊಡುವ ಮಾಧವನು, ಯಾವನು ಪರ್ವತ (ಅಗಂ) ಮತ್ತು ಭೂಮಿಯನ್ನು ಎತ್ತಿ ಹಿಡಿದನೋ, ಅವನು ರಕ್ಷಿಸಲಿ. ಇಲ್ಲಿ ಉಮಾಧವ (ಶಿವ) ಎಂದು ಬಿಡಿಸಿ ಯಾವನು ಗಂಗೆಯನ್ನು ಧರಿಸಿರುವನೋ ಅವನು ರಕ್ಷಿಸಲಿ ಎಂಬುದು ಎರಡನೆಯ ಅರ್ಥ.

11) **परिकरः** - अलंकारः परिकरः साभिप्राये विशेषणे।
सुधांशु कलितोत्तंसः तापं हरतु वः शिवः॥

ವಿಶೇಷಣಗಳಲ್ಲಿ ಸಾರ್ಥಕ್ಯ ತೋರಿದರೆ ಅದು ಪರಿಕರ - ಚಂದ್ರನನ್ನು ಧರಿಸಿದ ಶಿವನು ನಿಮ್ಮ ತಾಪವನ್ನು ನಿವಾರಿಸಲಿ. ಏಕೆಂದರೆ ತಾಪಹಾರಕ ಚಂದ್ರ ತಲೆಯ ಮೇಲಿರುವನು.

12) **अप्रस्तुतप्रशंसा** - अप्रस्तुतप्रशंसा स्यात् सा यत्र प्रस्तुताश्रया। एकः कृती शकुन्तेषु योऽन्यं शक्रान्न याचते। - ಒಂದನ್ನು ವರ್ಣಿಸಿ ಮತ್ತೊಂದನ್ನು ಸೂಚಿಸುವದು. ಚಾತಕ ಪಕ್ಷಿಯು ಇಂದ್ರನನ್ನು ಬಿಟ್ಟು ಬೇರೆಯವರನ್ನು ಯಾಚಿಸುವದಿಲ್ಲ. ಸ್ವಾಭಿಮಾನಿಯು ಭಗವಂತನನ್ನು ಬಿಟ್ಟು ಬೇರೆಯವರನ್ನು ಬೇಡುವದಿಲ್ಲ. ಇದು ಅನ್ಯೋಕ್ತಿಯೂ ಹೌದು.

ಈ ಅನ್ಯೋಕ್ತಿಗಳನ್ನು ಗಮನಿಸಿರಿ -

1) पत्राणि पल्लवशतानि मनोहराणि
शाखास्वसंख्य-कुसुमानि सुवासितानि।
आराम-भूषणशतानि फलानि वीक्ष्य
मूलं कथं पथिक विस्मृतवान् स्मयेन॥

2) अपक्वं नो रुच्यं विरसमपि पाषाणसदृशं
रसाल त्वं तीव्रं धरसि च शलाटुं शिरसि भोः।
सुपक्वं यत् कान्तं मृदुतनु सुवर्णं च सरसं
फलं तूर्णं मुञ्चस्यतितर-विचित्रस्तवविधिः॥
(शलाटुं = अपक्वं फलं, रसाल = आम्रवृक्ष)

## ವೃತ್ತಗಳು (METRES)

ಛಂದಸ್ಸು ವೇದದ ಮಂತ್ರಗಳಷ್ಟೇ ಅನಾದಿ. "ಛಂದಃ ಪಾದೌ" ಎಂಬಂತೆ ಛಂದಸ್ಸು ವೇದಗಳ ಪಾದಗಳಿದ್ದಂತೆ. ಇದು 6 ವೇದಾಂಗಗಳಲ್ಲಿ ಒಂದಾಗಿದೆ. ಈ ಶಾಸ್ತ್ರದ ಪ್ರವರ್ತಕನಾದ ಪಿಂಗಲಾಚಾರ್ಯನು ಕ್ರಿ.ಪೂ. 3ನೇ ಶತಮಾನದವನೆಂದು ತಿಳಿಯಲಾಗಿದೆ. ವೈದಿಕ ಛಂದಸ್ಸಿನ ಜೊತೆಗೆ ಲೌಕಿಕ ಛಂದಸ್ಸುಗಳನ್ನೂ ವಿವರಿಸಿದ್ದಾನೆ. ರಾಮಾಯಣದ

मा निषाद प्रतिष्ठां त्वमगमः शास्वती समाः।
यत् क्रौञ्चमिथुनादेकमवधीः काममोहितम्॥

ಇದು ಲೌಕಿಕ ವೃತ್ತಗಳಲ್ಲಿ ಮೊದಲ ಅನುಷ್ಟುಪ್ ಛಂದಸ್ಸಿನ ಶ್ಲೋಕವಾಗಿದೆ. ರಾಮಾಯಣ ಮಹಾಭಾರತಗಳಲ್ಲಿ ನೂರಾರು ವೃತ್ತಗಳನ್ನು ಬಳಸಲಾಗಿದೆ. ಏನೇ ಆದರೂ ಈ ಛಂದಸ್ಸುಗಳಲ್ಲಿ ಸಂಗೀತದ ರಾಗತಾಲಗಳಿಗೆ ಅನುಕೂಲವಾಗುವಂತಹ ಹಿನ್ನಲೆ ಇದೆ ಎಂಬಲ್ಲಿ ಎರಡು ಮಾತಿಲ್ಲ. ಲೌಕಿಕ ಪ್ರಮುಖ ವೃತ್ತಗಳ ಬಗ್ಗೆ ನೋಡೋಣ.

ಛಂದಸ್ಸಿನಲ್ಲಿ ಕೇವಲ ಮಾತ್ರಾಗಳ ಗಣನೆಯಿಂದ ಗಣಗಳನ್ನು ನಿರ್ಣಯಿಸುವದು 'ಆರ್ಯಾವೃತ್ತ'ವೆಂದು ಹೆಸರು. 4 ಮಾತ್ರಾಗಳಿಗೆ ಒಂದು ಗಣದಂತೆ (ಎರಡು ಗುರು ಇರಬಹುದು ಅಥವಾ 4 ಲಘು ಇರಬಹುದು ಅಥವಾ 1 ಗುರು 2 ಲಘು ಇರಬಹುದು) ಯೋಜಿಸಲಾಗುವದು.

ಹ್ರಸ್ವ ಅಕ್ಷರಕ್ಕೆ ಲಘು ಎಂದು ಹೇಳಲಾಗುವದು. एक मात्रो भवेद् ह्रस्वः द्विमात्रो दीर्घ उच्यते ಎಂಬಂತೆ ಗುರುಲಘುಗಳನ್ನು ಸೂಚಿಸಲಾಗಿದೆ. 'ಗುರು' ಆಗುವ ಅಕ್ಷರವನ್ನು ಹೀಗೆ ಹೇಳಲಾಗಿದೆ - सानुस्वारश्च दीर्घी च विसर्गी च गुरुर्भवेत्।

वर्णः संयोगपूर्वश्च तथा पादान्तगोऽपि च। र

ಅನುಸ್ವಾರವಿರುವ, ದೀರ್ಘವಿರುವ, ವಿಸರ್ಗವಿರುವ, ಸಂಯುಕ್ತಾಕ್ಷರದ ಹಿಂದಿನ ಹ್ರಸ್ವ ಅಕ್ಷರವು ಮತ್ತು ಪಾದದ ಕೊನೆಗಿರುವ ಹ್ರಸ್ವವು ಗುರು ಆಗುತ್ತದೆ. ಲಘು ∪ ಗುರು - ಹೀಗೆ ಗುರುತಿಸುವ ವ್ಯವಹಾರವಿದೆ. (ಆದರೆ ಗುರು ವಕ್ರ ऽ ಲಘು ಸರಳ । ಇದು ಶಾಸ್ತ್ರ)

1) **आर्यावृत्त**- ಮೇಲೆ ಸೂಚಿಸಿದಂತೆ ಇದರ ಸಾಮಾನ್ಯ ಲಕ್ಷಣವನ್ನು ಹೀಗೆ ಹೇಳಲಾಗಿದೆ -

- - ∪ ∪ - - - - ∪ ∪ - - ∪ - ∪ - - -

य स्याः प्र थ मे पा दे। द्वा द श मा त्रा स्त था तृ ती येऽ पि

अ ष्टा द श द्वि ती ये । च तु र्थ के प ञ्च द श सा र्या।।

ವೃತ್ತದ ಮೊದಲನೆಯ ಮತ್ತು 3ನೇ ಪಾದದಲ್ಲಿ 12 ಮಾತ್ರಾಗಳು, ಎರಡನೆಯ ಪಾದದಲ್ಲಿ 18 ಮಾತ್ರಾಗಳು ಮತ್ತು 4ನೇ ಪಾದದಲ್ಲಿ 15 ಮಾತ್ರಾಗಳು ಇರುತ್ತವೆ. ಇದರಲ್ಲಿ ಅನೇಕ ಪ್ರಭೇದಗಳಿವೆ. ಯತಿನಿಯಮವು ಇಲ್ಲಿ ಸ್ವಲ್ಪ ಕ್ಲಿಷ್ಟವಾದುದು. 'ಯತಿ' ಎಂದರೆ pause, ಒಂದು ಹಂತಕ್ಕೆ ನಿಲ್ಲಿಸಿ ಮುಂದುವರಿಯುವದು. (यतिर्विच्छेद संज्ञिका)

ಇನ್ನು ಅಕ್ಷರ ಗಣಗಳ ಛಂದಸ್ಸಿನಲ್ಲಿ 8 ಗಣಗಳಿವೆ. य-र-त-न-भ-ज-स-म ಆದಿ, ಮಧ್ಯ, ಅಂತ್ಯ ಮತ್ತು ಸರ್ವ ಲಘು ಇದ್ದಲ್ಲಿ ಕ್ರಮವಾಗಿ य-र-त-न, ಹಾಗೆಯೇ ಗುರು ಇದ್ದಲ್ಲಿ भ-ज-स-म ಗಣಗಳಾಗುತ್ತವೆ.

आदिलघुः-यगण, मध्यलघू रगणः, अन्त्यलघुस्तगणः, सर्वलघुर्नगणः।

आदिगुरुर्भगणः, मध्यगरुर्नगणः, अन्त्यगुरुः सगणः, सर्वगुरुर्मगणः।।

2) **अनुष्टुप्** - ಇಲ್ಲಿ 1 ಮತ್ತು 3ನೇ ಪಾದದಲ್ಲಿ 7ನೇ ಅಕ್ಷರವು ದೀರ್ಘವಿದ್ದು 2 ಮತ್ತು 4ನೇ ಸಾಲಿನ 7ನೇ ಅಕ್ಷರವು ಹ್ರಸ್ವವಾಗಿರುತ್ತದೆ. ಪ್ರತಿಯೊಂದು ಪಾದದ 5ನೇ ಅಕ್ಷರವು ಲಘು ಮತ್ತು 6ನೇ ಅಕ್ಷರವು ಗುರು ಇರಬೇಕು. ಲಕ್ಷಣಶ್ಲೋಕ ಹೀಗಿದೆ -

∪ - -　　　　∪ - ∪

श्लोके षष्ठं गुरु ज्ञेयं सर्वत्र लघु पञ्चमम्।

∪ - -　　　　∪ - ∪

द्विचतुष्पादयोः ह्रस्वं　　सप्तमं दीर्घमन्ययोः।।

ರಾಮಾಯಣ, ಮಹಾಭಾರತಗಳಲ್ಲಿ ಈ ಛಂದಸ್ಸು ಬಹುಭಾಗದಲ್ಲಿದೆ.(ಲಕ್ಷಣದ ಸಾಲಿನಲ್ಲಿಯೇ ಆ ವೃತ್ತದ ಉದಾಹರಣೆ ಇದೆ.)

3) **इन्द्रवज्रा** - स्यादिन्द्रवज्रा ततजास्ततो गौ
तगणः-नगणः-जगणः तथा गुरुद्वयम्।

4) **उपेन्द्रवज्रा**- उपेन्द्रवज्रा ज-त-जा स्ततो गौ
जगणः-तगणः-जगणः तथा गुरुद्वयम्।

5) **उपजातिः**- अनन्तरोदीरितलक्ष्म भाजौ
पादौ यदि स्यादुपजातयस्तौ।
ಹಿಂದೆ ಹೇಳಿದ ಇಂದ್ರವಜ್ರಾ ಮತ್ತು ಉಪೇಂದ್ರವಜ್ರಾ ವೃತ್ತಗಳ ಮಿಶ್ರಣವೇ ಉಪಜಾತಿ, ಅಂದರೆ ಎರಡೂ ಒಂದೊಂದು ಸಾಲು ಇದ್ದಲ್ಲಿ ಅದು ಉಪಜಾತಿ.

6) **द्रुतविलंबित** - द्रुतविलंबितमाह न भौ भ रौ। नगणः-भगणः-भगणः-रगणः

7) **पुष्पिताग्रा** - अयुजिन युजिरेफतो यकारो।
युजि च नजौ जरगाश्च पुष्पिताग्रा।
(नयुक्) नगणः-नगणः-रगणः-यगणः - ಇದು 1ನೇ ಪಾದದಲ್ಲಿ (अयुति)
नगणः-जगणः-जगणः-रगणः- गुरुः ಇದು 2ನೇ ಪಾದದಲ್ಲಿ (युति)

8) **पृथ्वी** - ज सौ ज स य ला वसुग्रहयतिश्च पृथ्वीगुरुः
जगणः-सगणः-जगणः-सगणः-यगणः लघु, गुरुः च।
8ನೇ ಅಕ್ಷರಕ್ಕೆ ನಂತರ 9ನೇ ಅಕ್ಷರಕ್ಕೆ ಯತಿನಿಯಮ.

9) **प्रहर्षिणी** - त्र्याशाभिर्मनजरगाः-प्रहर्षिणीयम्।
मगणः-नगणः-जगणः-रगणः तथा गुरुः।
3 ಅಕ್ಷರಗಳ ನಂತರ ಮತ್ತು ಪಾದದ ಕೊನೆಗೆ (आशा=10) ಯತಿನಿಯಮ.

10) **मन्दाक्रान्ता**- मन्दाक्रान्ता जलधि-षडगैर्मोभनौ तौ गुरू चेत्।
मगण भगण नगण तगण तगण तथा गुरुद्वयं।
जलधि-4, षट्-6, अगाः-7 - ಯತಿನಿಯಮ.

11) **मालिनी** - न-न-म-य य युतेयं मालिनी भोगि लौकैः
नगणः-नगणः-मगणः-यगणः यगणः।
भोगि-8, लोक-7 -8 ಅಕ್ಷರಗಳಿಗೆ ಮತ್ತು 7ಅಕ್ಷರಗಳಿಗೆ ಯತಿ ನಿಯಮ.

12) **रथोद्धता** - रा न्र रा विहरथोद्धता लगौ।
रगणः-नगणः-रगणः-लघु तथा गुरुः।

13) **रुचिरा** - जभौ स जौ गतिरुचिरा चतुर्ग्रहैः। (4 ಮತ್ತು 9ಕ್ಕೆ ಯತಿ)
जगणः-भगणः-सगणः-जगणः तथा गुरुः।

14) **वंशस्थः** - ज तौ तु वंशस्थमुदीरितं ज रौ
जगणः-तगणः-जगणः-रगणः। (ಪಾದಾಂತದಲ್ಲಿ ಯತಿನಿಯಮ)

15) **वसन्ततिलका** - उक्तावसन्ततिलका त-भ-जा-ज-गौ-गः
तगण-भगण-जगण-जगणः तथा गुरुद्वयम्।

16) **वियोगिनी** - विषमे स स जा गुरुः समे स भ रा लोऽ थ गुरुर्वियोगिनी।
ಇದು ವಿಷಮ ವೃತ್ತ (ಪಾದಗಳು ಭಿನ್ನ ಭಿನ್ನ ಲಕ್ಷಣ ಇರುವಂತಹದು). ಮೊದಲನೆಯ ಪಾದ ಮತ್ತು 3ನೇ ಪಾದ ಒಂದೇ ರೀತಿಯಾಗಿದ್ದು 2 ಮತ್ತು 4ನೇ ಪಾದ ಒಂದೇ ತರಹ.
सगणः-सगणः-जगणः-गुरुः च ಇದು 1 ಮತ್ತು 3ನೇ ಪಾದದಲ್ಲಿ
सगण-भगण-रगण-लघु तथा गुरुः ಇದು 2 ಮತ್ತು 4ನೇ ಸಾಲಿನಲ್ಲಿ.

17) **शार्दूलविक्रीडितम्** -
सूर्याश्वैर्म स ज स्त ताःसगुरवः शार्दूलविक्रीडितम्।
मगणः-सगणः-जगणः-सगणः-तगणः-तगण तथा गुरुः।
सूर्य-12, अश्व-7, 12 ಮತ್ತು 7 ಅಕ್ಷರಗಳ ನಂತರ (ಪಾದಾಂತ) ಯತಿನಿಯಮ.

18) **शिखरिणी**- रसैरुद्रैश्छिन्ना, य म न स भ ला गः शिखरिणी
यगण-मगण-नगणः-सगणः, भगणः, लघुः गुरुः
रसा-6, रुद्राः-11 - ಯತಿನಿಯಮ.

19) **स्रग्धरा** - म्रभ्नैर्यानां त्रयेण त्रिमुनियतियुता स्रग्धरा कीर्तितेऽयम्।
मगणः-रगणः-भगणः-रगणः-यगणः-यगणः-यगणः।
त्रिमुनि-7X3 ಏಳು ಅಕ್ಷರಗಳಿಗೆ ಒಂದರಂತೆ ಯತಿನಿಯಮ.

20) **हरिणीवृत्त**- न-स-म-र सलगः षड्वेदैर्हयैर्हरिणी मता।
नगणः-सगणः-भगणः-रगणः-सगणः तथा लघु, गुरुः।
(6 ಮತ್ತು 7 (हय) ಅಕ್ಷರಕ್ಕೆ ಯತಿ)



## ಅಧ್ಯಾಯ ೧೫
## ಪ್ರಬಂಧಗಳು ಮತ್ತು ಅನುವಾದ ಪರಿಚ್ಛೇದಗಳು
## लघु-प्रबन्धाः

**1. पाणिनिः -**

संस्कृतसाहित्ये पाणिनिः व्याकरणसाम्राज्यस्य चक्रवर्ती इत्येव विराजते। तस्य व्याकरणशास्त्रं अतीव वैज्ञानिकं वर्तते इति पाश्चिमात्यैरपि मुक्तकण्ठं गीयते। पाणिनिमुनिः महेश्वरस्य अनुग्रहं संपाद्य व्याकरणसूत्राणि रचयामास इति ज्ञायते अनेन श्लोकेन -

**येनाक्षर-समाम्नायमधिगम्य महेश्वरात्।**
**कृत्स्नं व्याकरणं प्रोक्तं तस्मै पाणिनये नमः ।। इति।**

पाणिनेः कालः कृ. पूर्वं 500 वर्षाणि इति मनीषिणः मन्यन्ते। 'जाम्बवती जयं' इति काव्यमपि विरचितवान् इति ज्ञायते। पाणिनिना विरचितानि व्याकरण सूत्राणि 'अष्टाध्यायि' इत्युच्यते। सर्वेषामपि सूत्राणां मूलशिलान्यास इव चतुर्दश-माहेश्वरसूत्राणि सन्ति। एवं संस्कृतपितामहस्य पाणिनेः व्याकरणशास्त्रेण सर्वेषां वाणी सुसंस्कृता भवति। सः सर्वैः वन्दनीयः अस्ति। तथाहि

**येन धौता गिरःपुंसां विमलैशब्दवारिभिः।**
**तमश्चाज्ञानजं भिन्नं तस्मै पाणिनये नमः ।।**

*

**2. वैद्यः**

मानवजीवने जननादारभ्य मरणपर्यन्तं वैद्यस्य पात्रं अनिवार्यं दृश्यते। जीवने तस्य अनिवार्यतां मनसि निधाय तस्य सन्दर्भस्य दुरुपयोगो यथा न भवति तथा यत्नो विधेयो वैद्येन। केवलं धनसंग्रहार्थं वैद्यवृत्तिराश्रयणीया इति अनेकेषां मातापितृणां युवतियूनां च आशयः सामान्येनावलोक्यते। परं यद्यपि धनार्जनं आवश्यकं तथापि प्राधान्येन समाजसेवार्थं जनहितार्थं चिकित्सकस्य सेवाकार्यं केन्द्रीकृतं भवेत्। रोगिणां व्याधिनिवारणमेव स्वकर्तव्यमिति स मन्येत। नोचेत् वैद्यः प्रसिद्धस्यास्य सुभाषितस्य उदाहरणं भवेत्।

वैद्यराज नमस्तुभ्यं यमराजसहोदर।
यमस्तु हरति प्राणान् वैद्यः प्राणान् धनानि च॥

अतः सर्वथा वैद्य-महाविद्यालये बहुधनानि दत्वा प्रवेशं लब्ध्वा परिश्रमातिशयेन उत्तीर्णो भविष्यति। अनन्तरं तत् सर्वं धनं पुनर्लब्धुं यतते इति समाजे यः कलङ्कः श्रूयते स तु प्रक्षालनीयः। एतादृशं सद्भावबोधकं अध्ययनमपि तस्य शालायां बोधनीयम्। सर्वथा देशस्य प्रगतिं साधयितुं जनसेवां च कर्तुं वैद्याः बद्धकटयो भवेयुरिति आशास्महे।

*

## 3. वसन्तकालः

काव्यरसपाके ऋतवः षडपि नवरसान् उत्पादयन्ति। तेषु वसन्तर्तुः नववर्षस्य देहल्यां नवोत्साहेन भूमिमवतरति शीतसमयानन्तरम्। शीतलातपसमयायोः सन्धिकाले वसन्ते सौन्दर्यस्य अभिनवसाम्राज्यं समुल्लसति। अत एव मनोहरतरैः रमणीयांशैः ऋतुराजः इत्येव भुवनविदितो वसन्तः शोभते।

प्रातःकाले मन्दं मन्दं संचरन् गन्धवहः पुष्पाणां गन्धं हरन् जनानां मनांसि अपि हरति। विकसितानि कुसुमानि भ्रमराणां स्वागताय मधुना सह तिष्ठन्तीव भान्ति। सरागपल्लवैः, नवाङ्कुरैः, हरित्पत्रपुटैः महीरुहाः वसन्तागमनं सूचयन्ति। ईदृशं च वातावरणं कविहृदयमपि विकासयति।

सायंकालेऽपि जनाः शीतलानन्दं अनुभवन्ति। शुकपिककपीनां कलकलनादैः दिनमुखे रजनीमुखे च अरसिकानामपि मनांसि आकृष्यन्ते। चन्द्रिकायां शीतलप्रधानं सौन्दर्यं द्रष्टुं काश्चन तारकाः अवतरन्तीव पतन्ति। एवमेव एषः वसन्तकालः सकलानन्दजनकैः साधनैः स्व पर्यायकाले समस्तं प्रपञ्चं आल्हादयति। तथाच -

वसन्तस्त्वं सर्वान् मृदुपवनसञ्चारसुभगं
प्रमोदं सिञ्चन् वा शुकपिकखगानां कलरवैः।
सुमानां हासैर्वा विविधनवरागाङ्कुरभरै-
रिदानीं निर्गच्छन् किमपि हृदि खेदं वितरसि॥

*

### 4. अर्थनीतिः

अर्थं विना मानवजीवनं निरर्थकमिति समग्रेऽप्यवनीतले इदं तु विवादरहितं सत्यं यत् अर्थं विना मानवजीवनं निरर्थकमिति । अत एवोच्यते -"नष्टे नीरे कः कासारः नष्टे द्रव्ये कः परिवार" इति। धनवान् पुरुषः सर्वत्र समाजे गौरवेण विराजमानो भवति। धनहीनस्तु शोचनीयां दशामाप्नोति। अत एव नूतनतया-"धनेन विना तृणमपि न चलति" इत्यपि वक्तुं शक्नुमः। "सर्वे गुणाः काञ्चनमाश्रयन्ते" इति भर्तृहरेः व्यंग्योक्तिः त्रिकालाबाधिता इव प्रशस्यते।

यद्यपि "हिरण्यमेवार्जय निष्फला गुणाः" इति उपदिश्यते सुभाषितैः तथापि धर्ममार्गेण यत् वित्तं संपाद्यते तत् सार्थकं भवतीति महाभारते एवं निगद्यते - "धर्मादर्थश्च कामश्च स किमर्थं न सेव्यते" इति। धर्माविरुद्धेन मार्गेण धनार्जनं क्रियते चेत् तत् स्वल्पमपि द्रव्यं बहु इत्येव मन्तव्यं इत्येवमुपदिश्यते -

अकृत्वा परसन्तापं अगत्वा खलनम्रतां।
अनुत्सृज्य सतां मार्गं यत् स्वल्पमपि तत् बहु॥ इति।

परवञ्चनायनेन प्रचुरं धनं प्राप्नुयुः परं तेन मनसः समाधानं न लभ्यते। धनार्जन विषये दैवमवलम्ब्य परिश्रमं विहाय नैव स्थातव्यम्। "साहसे श्रीः प्रतिवसति" इति न्यायेन महाकांक्षिणा पुरुषेण भवितव्यम्। किन्तु "दुराशा विनाशाय" इति अवधेयम्। अतः धर्माश्रिता अर्थनीतिरेव जीवनस्य धनस्य च सार्थक्यं संपादयतीति सर्वमनवद्यम्।

*

### 5. आरोग्यम्

शरीरमाद्यं खलु धर्मसाधनम् इति कालिदासः आरोग्यस्य सौभाग्यं न केवलं लौकिकजीवने सुखसन्तोषाधिकं संपादयति अपितु पारमार्थिक-जीवनेऽपि सार्थक्यं सूचयति। आरोग्यमेव भाग्यमिति मानवः आनारोग्यस्य अवस्थायां अधिकं विविनक्ति। दरिद्रोऽपि नीरोगी सर्वथा प्रशस्यते। रोगदारिद्र्ययोः दारिद्र्यमेव वरं।

प्रत्यहं व्यायामेन, योगासनैर्वा नियमित वायुविहारेण वा आरोग्यं अविकृतं सत्वयुतं च तिष्ठति। वातपित्थकफादीनां साम्यावस्था एव आरोग्यमिति निगद्यते। पौष्टिकाहारेण अकलुषितेन शुद्धेन जलेन, आरोग्यं परिवर्धते। परिसरमालिन्येन रहितस्य वायोः सेवनं यद्यपि सम्मर्दमयेषु नगरेषु दुर्लभमिव लक्ष्यते तथापि वृक्षवाटिकादिभिः सुसंस्कृतेन समीरणेन आरोग्यं नितरां परिपुष्यते।

आरोग्यसंवर्धने क्षीरस्य, फलानां, शाकपत्रादीनां पात्रं अधिकं वर्तते। "आलस्यं हि मनुष्याणां शरीरस्थो महान् रिपुः" इत्यनेन आलस्यं आरोग्यस्य शत्रुः तच्च परिहरणीयम्। एवं च आरोग्यस्य शुद्धसाधनानि संपादयितुं सर्वैरस्माभिः प्रयतनीयम्।

आरोग्यं सर्वलोकानां परमं भाग्यमुच्यते।
प्रवर्धन्ते चिरं यस्मात् बुद्धिस्तेजो यशो बलम्॥

*

## 6. भारतीय-संस्कृतिः

**दृढबद्धधर्ममूलो वेदस्कन्धः पुराणशाखाढ्यः**
**क्रतुकुसुमो मोक्षफलो संस्कृतिपादपश्चिरं जयति॥**

इति इयं संकृतिः अद्यापि जेगीयते, संरक्ष्यते च। अखण्ड भूमण्डले विदितविषयोऽयं यत् भारतदेशः पुरातनसंस्कृतेः अद्वितीयसंश्रयः इति। यदा च समग्रोऽपि विश्वः अज्ञानवितानछायायां गाढं स्वपिति स्म तदा ज्ञानसूर्योदयस्य प्रखरप्रकाशपुञ्जं दृष्टवन्तः भारतीयाः। सैव सनातनसंस्कृतिः अद्यापि अविच्छिनतया राराजते। यदा सर्वत्र जगति अज्ञानवृत्तिरासीत् तदा ज्ञानदीपेन प्रकाशं विकीरितवान् वेदराशिः। सा एव च वैदिकप्रधाना संस्कृतिः अद्यापि यदि दृश्यते चेत् तत्र निदानं तावत् धर्मः ज्ञानं संस्कृतभाषा च संस्कृतिः धर्मप्रधाना। श्रुतिस्मृतयः, पुराणग्रन्थाः, शास्त्राणि, दर्शनग्रन्थाश्च अस्याः धर्मसंस्कृतेः आकरग्रन्थाः आश्रयग्रन्थाः। संस्कृतभाषा संस्कृतेः हृदयं वर्तते उत्तमाङ्गं च विद्यते।

"वसुधैव कुटुम्बकम्", "स्वधर्मे निधनं श्रेयः" इत्यादि वचनैः अस्माकं संस्कृतेः औदार्यं पश्यामः। "आचारः प्रथमो धर्मः", "अहिंसा परमो धर्मः",

"सत्यं वद, धर्मं चर" इत्यादिभिः कर्तव्यप्रधानस्य सदाचारस्य संहितां उपदिशति अस्माकं संस्कृतिः। "मातृदेवो भव", "पितृदेवो भव", "आचार्य देवो भव", "अतिथिदेवो भव" इत्यादिभिः गौरवस्थानानि कानि इति सूचयतीयं संस्कृतिः। "न हि ज्ञानेन सदृशं पवित्रमिह विद्यते", "ज्ञानादेव तु कैवल्यम्" इत्यादिना विद्यायाः महिमानं उद्घोषयतीयं धर्मसंस्कृतिः। "परोपकारार्थमिदं शरीरम्", "परोपकारः पुण्याय पापाय परपीडनम्" इत्यादिभिः सौजन्यस्य पराकाष्ठां दर्शयतीयं संस्कृतिः।

रामायण-महाभारतादयः इतिहासग्रन्थाः भारतीय-संस्कृतेः परिपूर्णं प्रतिबिम्बं प्रतिस्फालयन्ति। अनेकानि धर्मसाम्राज्यानि, पतिव्रतस्त्रीणां जीवनचरितानि, महात्मनां आदर्शजीवनानि भारतीय संस्कृतेः विविधा मुखानि प्रदर्शयन्ति। "धर्मो रक्षति रक्षितः" "जीयात् संस्कृत भारती" इति शिवम्।

*

## ಅನುವಾದ ಪರಿಚ್ಛೇದಗಳು
## TRANSLATION PASSAGES

೧. ನಂತರ ಧರ್ಮವ್ಯಾಧನು ಕೌಶಿಕನಿಗೆ ಹೀಗೆ ಉಪದೇಶಿಸುತ್ತಾನೆ -"ಹೇ ಮುನಿಯೇ ನೀನು ತಂದೆ ತಾಯಿಗಳ ಸೇವೆಯನ್ನು ತ್ಯಜಿಸಿ ತಪವನ್ನು ಆಚರಿಸುವಿ. ಇದು ಸರಿ ಅಲ್ಲ. ತಂದೆ ತಾಯಿಗಳ ಸೇವಾಧರ್ಮವೇ ಒಂದು ದೊಡ್ಡ ತಪಸ್ಸು. ಅದು ನಿನ್ನ ಕರ್ತವ್ಯ. ಹಿರಿಯರ ಆಶೀರ್ವಾದದಿಂದ ನಿನಗೆ ಕಲ್ಯಾಣವಾಗುವದು. ಪುತ್ರನಿಂದ ಅವರ ಮನಸ್ಸಿಗೆ ನೋವು ಆದರೆ ಆ ಪುತ್ರನಿಗೆ ಎಂದೂ ಮಂಗಲವಾಗುವದಿಲ್ಲ. ಆದ್ದರಿಂದ ಮನೆಗೆ ಹೋಗಿ ಮಾತಾ-ಪಿತೃಗಳ ಸೇವೆಯನ್ನು ಮಾಡು."

೨. ಪ್ರವಾಸದ ಮಾರ್ಗದ ಪಕ್ಕದಲ್ಲಿ ಒಂದು ಸರೋವರವು ಹೀಗೆ ಚಿಂತಿಸಿತು - "ಪ್ರಖರವಾದ ಸೂರ್ಯನ ಈ ಬಿಸಿಲಿನಿಂದ ನಾನು ದಿನೇ ದಿನೇ ಒಣಗಿ ಹೋಗುತ್ತೇನೆ. ಈ ಗ್ರೀಷ್ಮ ಋತುವಿನ ಸಂತಾಪದಿಂದ ನಾನು ಒಣಗಿ ಹೋದಮೇಲೆ ಈ ಪ್ರವಾಸಿಗರಿಗೆ ನೀರು ಯಾರು ಕೊಡುವರು?" ಹೀಗೆ ಚಿಂತಿಸುತ್ತ ಆ ಸರೋವರವು ಕೃಶವಾಗುತ್ತಲಿದೆ. ಪರೋಪಕಾರದ ಸಲುವಾಗಿ ಚಿಂತಿಸುತ್ತಿರುವ ಅದರ ಜೀವನವು ಧನ್ಯ. ನೀರಿನ ರಾಶಿಯೇ ಇದ್ದರೂ ಸಮುದ್ರಕ್ಕೆ ಪರೋಪಕಾರ ಬುದ್ಧಿಯಿಲ್ಲ. ಸಮುದ್ರದ ಜೀವನಕ್ಕೆ ಧಿಕ್ಕಾರವಿರಲಿ.

೩. ಹೇ ಕಮಲವೇ ಭೃಂಗಗಳು ನಿನ್ನ ಮಕರಂದವನ್ನು ಕುಡಿಯುತ್ತವೆ. ನಂತರ ನಿನ್ನ

ಗುಣಗಾನ ಮಾಡುತ್ತವೆ. ಆದರೆ ಗಾಳಿಯು ಎಲ್ಲ ದಿಕ್ಕುಗಳಲ್ಲಿ ನಿನ್ನ ಸುಗಂಧವನ್ನು ಪ್ರಸಾರಮಾಡುತ್ತದೆ. ಆ ವಾಯುವು ನಿನ್ನಿಂದ ಯಾವ ಫಲವನ್ನೂ ಅಪೇಕ್ಷಿಸುವದಿಲ್ಲ. ಸಜ್ಜನರು ಸ್ವಾರ್ಥವಿಲ್ಲದೆ ಪರರಲ್ಲಿರುವ ಸದ್ಗುಣಗಳನ್ನು ಜಗತ್ತಿನಲ್ಲಿ ಪ್ರಸಾರಮಾಡುವರು. ಅವರು ಸತ್ಯವಾಗಿಯೂ ಸಮಾಜದ ಬಂಧುಗಳು. ಅವರ ಜೀವನ ಧನ್ಯವಾದುದು.

೪. ಒಂದು ದಿನ ಅಕ್ಕಮಹಾದೇವಿಯು ಉಷಃಕಾಲದಲ್ಲಿ ಎದ್ದು ಸ್ನಾನ ಮಾಡಿದಳು. ಧೌತವಸ್ತ್ರಗಳನ್ನು ಧರಿಸಿ ಭಸ್ಮಧಾರಣ ಮಾಡಿಕೊಂಡಳು. ರುದ್ರಾಕ್ಷಮಾಲೆಯನ್ನು ಹಾಕಿಕೊಂಡಳು. ನಂತರ ದೇವಾಧಿದೇವನಾದ ಮಲ್ಲಿಕಾರ್ಜುನನ ಮುಂದೆ ಪೂಜೆ ಮಾಡುವದಕ್ಕೆ ಕುಳಿತಳು. ಪ್ರಸನ್ನ ಮನಸ್ಸಿನಿಂದ ಧ್ಯಾನ ಮಾಡಿದಳು. ಆಗ ಅವಳ ಮುಖವು ತೇಜೋಮಯವಾಗಿತ್ತು. ಮಹೇಶ್ವರನನ್ನು ವಶಪಡಿಸಿಕೊಳ್ಳಲು ತಪೋಮಗ್ನಳಾದ ಪಾರ್ವತಿಯಂತೆ ಶೋಭಿಸುತ್ತಿದ್ದಳು.

೫. ವಾಲ್ಮೀಕಿ ಎಂಬ ಮುನಿಯು ಈ ಆಶ್ರಮದಲ್ಲಿ ವಾಸಿಸುತ್ತಿದ್ದನು. ಸುಂದರವಾದ ಪರಿಸರವೇ ಈ ಆಶ್ರಮದ ರಮಣೀಯ ಅಂಶವಾಗಿದೆ. ಕಲಕಲ ನಾದದೊಂದಿಗೆ ತಮಸಾ ನದಿಯು ಹರಿಯುತ್ತದೆ. ಈ ಪ್ರದೇಶದಲ್ಲಿ ಪಕ್ಷಿಗಳ ಮಧುರಧ್ವನಿಯು ಯಾವಾಗಲೂ ಪ್ರತಿಧ್ವನಿಯನ್ನು ಮಾಡುತ್ತದೆ. ಇಲ್ಲಿ ಗಿಡಗಳು ಯಾವಾಗಲೂ ಹಸಿರಾಗಿ ಇರುತ್ತವೆ. ರಾಮಾಯಣವನ್ನು ಬರೆಯಲು ಆ ಮುನಿಗೆ ಈ ಪುಣ್ಯಕ್ಷೇತ್ರವೇ ಪ್ರೇರಕವಾಯಿತು.

೬. ಕಾಯ್ದ ಕಬ್ಬಿಣದ ಮೇಲೆ ಬಿದ್ದ ನೀರಿನ ಹನಿಗಳು ಸರ್ವನಾಶವಾಗುತ್ತವೆ. ಅದೇ ನೀರಿನ ಹನಿಗಳು ಕಮಲದ ಮೇಲೆ ಬಿದ್ದರೆ ಮಣಿಯಂತೆ ಶೋಭಿಸುತ್ತವೆ. ಸ್ವಾತಿ ನಕ್ಷತ್ರದ ಸಮಯದಲ್ಲಿ ಮೇಘದ ಬಿಂದುಗಳು ಶುಕ್ತಿಯಲ್ಲಿ ಸೇರಿದರೆ ಮುತ್ತುಗಳು ಆಗುತ್ತವೆ. ಹೀಗೆ ಪ್ರಾಯಃ ಮನುಷ್ಯನು ಸಹವಾಸದಿಂದ ಉತ್ತಮ, ಮಧ್ಯಮ ಮತ್ತು ಅಧಮನಾಗುತ್ತಾನೆ. ಆದ್ದರಿಂದ ಉತ್ತಮ ಜನರ ಸಹವಾಸ ಮಾಡಬೇಕು.

೭. ಒಬ್ಬ ರಾಜನು ಒಂದು ದಿನ ಬೆಳಿಗ್ಗೆ ಎದ್ದು ಕಿಟಕಿಯಲ್ಲಿ ನೋಡಿದನು. ದಾರಿಯಲ್ಲಿ ಒಬ್ಬ ಕ್ಷೌರಿಕನು ಕಂಡನು. ಶಯನಗೃಹದಿಂದ ಬರುವಾಗ ಬಾಗಿಲು ಬಡಿದು ತಲೆಗೆ ಗಾಯವಾಯಿತು. ಕೋಪದಿಂದ ಅವನನ್ನು ಕರೆಸಿದನು. ನಿನ್ನನ್ನು ನೋಡಿದ್ದರಿಂದಲೇ ನನಗೆ ಪೆಟ್ಟಾಯಿತು. ಕಾರಣ ನಿನಗೆ ಮೃತ್ಯುದಂಡವನ್ನು ವಿಧಿಸುವೆನು ಎಂದನು. ಆಗ ಕ್ಷೌರಿಕನು ನಗುತ್ತ -"ಪ್ರಭುಗಳೇ ನಿಮ್ಮನ್ನು ನಾನು ನೋಡಿದ್ದರಿಂದ ನನಗೆ ಮೃತ್ಯುವೇ ಬಂದಿತು" ಎಂದನು. ರಾಜನು ನಾಚಿಕೆಯಿಂದ ಅವನನ್ನು ಬಿಟ್ಟುಬಿಟ್ಟನು.

೮. ಮಹಾಭಾರತದ ಬಹುಭಾಗವು ಧರ್ಮದ ನೀತಿಸಂಹಿತೆಯನ್ನು ವಿವರಿಸುತ್ತದೆ. ದೇವತೆಗಳು, ದೈತ್ಯರು, ನಾಯಕರು, ಪತಿವ್ರತಾ ಸ್ತ್ರೀಯರು ಮತ್ತು ಪಶುಪಕ್ಷಿಗಳು ಇವರೆಲ್ಲರ ಕಥೆಗಳು ನಮಗೆ ಉತ್ತಮ ನೀತಿಯನ್ನು ಉಪದೇಶಿಸುತ್ತವೆ. ಸಂಸ್ಕೃತಕವಿಗಳು ಈ ಕಾವ್ಯದಿಂದ

ಹೆಚ್ಚು ಕಥಾವಸ್ತುಗಳನ್ನು ಪಡೆಯುತ್ತಾರೆ. ಇದೊಂದು ಸಂಸ್ಕೃತ ಸಾಹಿತ್ಯದ ಉತ್ತಮ ಆಕರ ಗ್ರಂಥವಾಗಿದೆ. ಇದು ಭಾರತ ದೇಶದಲ್ಲಿ ಅಷ್ಟೇ ಅಲ್ಲ ಪರದೇಶಗಳಲ್ಲಿಯೂ ಪ್ರಸಿದ್ಧವಾಗಿದೆ. ವ್ಯಾಸಮಹರ್ಷಿಯು ಈ ಕಾವ್ಯದಲ್ಲಿ ಬರುವ ಒಬ್ಬ ವ್ಯಕ್ತಿಯೂ ಆಗಿದ್ದಾನೆ. ಧರ್ಮವು ಈ ಗ್ರಂಥದ ಕೇಂದ್ರಬಿಂದು ಆಗಿದೆ.

೯. ನಂತರ ಭಾರದ್ವಾಜ ಮುನಿಗಳು ತಮ್ಮ ಶಿಷ್ಯರಿಗೆ ಹೀಗೆ ನುಡಿದರು -"ವಾಲ್ಮೀಕಿ ಎಂಬ ಮಹರ್ಷಿಗಳು ಈ ಆಶ್ರಮದಲ್ಲಿ ವಾಸವಾಗಿರುತ್ತಾರೆ. ಅವರಿಗೆ ಕ್ಷಮಾಗುಣವೇ ದೊಡ್ಡ ಸಂಪತ್ತಾಗಿದೆ. ತಪಸ್ಸಿನಿಂದ ಮತ್ತು ವಿದ್ಯೆಯಿಂದ ವಿನಯಶೀಲರಾದ ಅವರು ಆದರ್ಶ ಮುನಿಗಳಾಗಿದ್ದಾರೆ. ಪ್ರಸನ್ನವಾದ ವಾತಾವರಣವು ಈ ಆಶ್ರಮದ ಪರಮಶೋಭೆಯಾಗಿದೆ. ತಮಸಾ ನದಿಯು ತನ್ನ ಮಂಜುಲ ಧ್ವನಿಯಿಂದ ಈ ಆಶ್ರಮದ ಪಕ್ಕದಲ್ಲಿ ಹರಿಯುತ್ತದೆ. ಈ ಪ್ರದೇಶವು ಯಾವಾಗಲೂ ಪಕ್ಷಿಗಳ ಮಧುರ ಧ್ವನಿಯಿಂದ ಪ್ರತಿಧ್ವನಿತವಾಗಿರುತ್ತದೆ. ಋಷಿಗಳ ಪ್ರಭಾವದಿಂದ ಇಲ್ಲಿಯ ಗಿಡಗಳು ಯಾವಾಗಲೂ ಹಸಿರಾಗಿಯೇ ಇರುತ್ತವೆ."

೧೦. ಪ್ರಾಚೀನ ಕಾಲದಲ್ಲಿ ಸರಯೂ ನದಿಯ ದಂಡೆಯ ಮೇಲೆ ಶುದ್ಧೋದನ ಎಂಬ ರಾಜನಿದ್ದನು. ಅವನಿಗೆ ಮಾಯಾದೇವೀ ಎಂಬ ಪತ್ನಿ ಇದ್ದಳು. ಅವರಿಗೆ ಸುಂದರನಾದ ಮಗನು ಹುಟ್ಟಿದನು. ಅವನಿಗೆ ಸಿದ್ಧಾರ್ಥ ಎಂದು ಹೆಸರಿಟ್ಟರು. ಅವನ ವಿದ್ಯಾಭ್ಯಾಸಕ್ಕೆಂದು ಅವನ ತಂದೆಯು ಎಲ್ಲ ವ್ಯವಸ್ಥೆಯನ್ನು ಮಾಡಿದನು. ಉಪಾಧ್ಯಾಯರ ಉಪದೇಶದಿಂದ ಅವನು ಎಲ್ಲ ವಿದ್ಯೆಗಳನ್ನು ಕಲಿತನು. ಆದರೆ ಅವನು ಏಕಾಂತಪ್ರಿಯನಾಗಿದ್ದನು.

೧೧. ಅವರನ್ನೇ ಪುನಃ ಪುನಃ ಧ್ಯಾನಿಸುತ್ತ ಭರತನು ಹೀಗೆ ಹೇಳಿದನು -"ತಾಯಿ ತಂದೆಗೆ ಸಮರಾದ ನನ್ನ ರಾಮ ಮತ್ತು ಸೀತೆಯರು ಎಲ್ಲಿರುವರು? ಲಕ್ಷ್ಮಣನು ಎಲ್ಲಿಗೆ ಹೋದನು?" ಮಹರ್ಷಿಗಳಾದ ವಸಿಷ್ಠರು ವಿಲಪಿಸುತ್ತಿರುವ ಭರತನನ್ನು ಹೀಗೆ ಸಮಾಧಾನ ಪಡಿಸಿದರು - "ವತ್ಸನೇ, ಧೈರ್ಯ ತೆಗೆದುಕೋ. ಹೀಗೆ ದುಃಖಿತನಾಗಬೇಡ. ದೈವವು ಸರ್ವ ಸಮರ್ಥ. ಅದರಂತೆ ನಿನ್ನ ತಂದೆಯು ಸ್ವರ್ಗಕ್ಕೆ ಹೋಗಿದ್ದಾನೆ. ರಾಮನು ದುಷ್ಟರನ್ನು ಶಿಕ್ಷಿಸಿ ತನ್ನ ಕರ್ತವ್ಯವನ್ನು ಪೂರೈಸಿ ಬೇಗನೆ ಮರಳುವನು."

೧೨. ಮಹಾಭಾರತದಲ್ಲಿ ದ್ರೋಣನ ವಧೆಗಾಗಿ ಕೃಷ್ಣನು ಒಂದು ಉಪಾಯವನ್ನು ಮಾಡಿದನು. ಅದರಂತೆ ಭೀಮನು ಒಂದು ಆನೆಯನ್ನು ಕೊಂದು ದ್ರೋಣನ ಸಮೀಪಕ್ಕೆ ಹೋಗಿ ಹೇಳುವನು- "ನಾನು ಅಶ್ವತ್ಥಾಮನನ್ನು ಕೊಂದೆನು" ಎಂದು. ಆದರೆ ಚಿರಂಜೀವಿಯಾದ ಅಶ್ವತ್ಥಾಮನ ಮರಣದ ಬಗ್ಗೆ ದ್ರೋಣನಿಗೂ ನಂಬಿಕೆ ಇರಲಿಲ್ಲ. ಅವನು ಧರ್ಮರಾಜನನ್ನು ಕೇಳಿದನು - "ಏನು ಇದು ಸತ್ಯವೇ?" ಎಂದು. ಆಗ ಧರ್ಮರಾಜನು ಕೃಷ್ಣನ ಪ್ರೇರಣೆಯಿಂದ "ಅಶ್ವತ್ಥಾಮನು ಹತನಾದನು, ಆದರೆ ಆನೆಯೋ ಅಥವಾ ಮನುಷ್ಯನೋ ಗೊತ್ತಿಲ್ಲ" ಎಂದು ಘೋಷಣೆ ಮಾಡುವನು.

೧೩. ಭಯಂಕರವಾದ ಗ್ರೀಷ್ಮ ಸಮಯದಲ್ಲಿ ಗಿಡವು ಒಣಗಿ ಹೋಗುವುದು. ಅಂತಹ ದುರವಸ್ಥೆಯಲ್ಲಿ ಮಾಲಾಕಾರನು ತನ್ನ ಶಕ್ತ್ಯನುಸಾರ ಸ್ವಲ್ಪ ಸ್ವಲ್ಪವಾದರೂ ನೀರುಣಿಸಿ ಗಿಡಗಳ ಜೀವವನ್ನು ರಕ್ಷಿಸಿ ಮಹೋಪಕಾರ ಮಾಡುತ್ತಾನೆ. ಈ ಪುಣ್ಯವು ವರ್ಷಾಕಾಲದಲ್ಲಿ ಧಾರಾಕಾರವಾಗಿ ನೀರು ಸುರಿಸುವ ಮೇಘಕ್ಕೆ ಸಿಗಲು ಸಾಧ್ಯವೆ? ಹಾಗೆಯೇ ಘೋರವಾದ ಆಪತ್ತಿನಲ್ಲಿರುವ ಮನುಷ್ಯನಿಗೆ ಯಾರಾದರೂ ಸ್ವಲ್ಪವಾದರೂ ಸಹಾಯ ಮಾಡಿದರೆ ಅದು ಬಹಳ ದೊಡ್ಡ ಉಪಕಾರವಾಗುತ್ತದೆ. ಆಪತ್ತು ಇಲ್ಲದೇ ಅನುಕೂಲವಿರುವಾಗ ನೂರು ಪಟ್ಟು ಸಹಾಯ ಮಾಡಿದರೂ ಅದು ದೊಡ್ಡ ಉಪಕಾರವಾಗಲಾರದು.

೧೪. ಹೇ ಪರಶಿವನೇ ನೀನು ಕಿರಾತವೇಷವನ್ನು ಧರಿಸಿ ಅರ್ಜುನನ ಭಕ್ತಿಯ ಪರೀಕ್ಷೆ ಮಾಡಿರುವಿ ಅದೇ ಬೇಟೆಗಾರನ ವೇಷದಿಂದ ನನ್ನ ಮನದಲ್ಲಿಯೂ ಕೂಡ ನೆಲೆಸಿ ಬಿಡು. ನನ್ನ ಮನದಲ್ಲಿ ಅಹಂಕಾರ, ಮಾತ್ಸರ್ಯ, ಕ್ರೋಧ ಮುಂತಾದ ಕ್ರೂರ ಮೃಗಗಳು ವಾಸಮಾಡಿರುತ್ತವೆ. ನೀನು ದಯಮಾಡಿ ಅವುಗಳ ಬೇಟೆಯಾಡಿ ಅವುಗಳನ್ನು ನಾಶಮಾಡು. ಆಗ ನಿನಗೆ ಬೇಟೆಯ ವಿನೋದವು ಸಿಗುತ್ತದೆ. ನಮ್ಮಲ್ಲಿರುವ ದುರ್ಗುಣಗಳೆಂಬ ಕ್ರೂರ ಮೃಗಗಳೂ ನಾಶವಾಗುತ್ತವೆ.

೧೫. ಹೇ ಪರಮೇಶ್ವರನೇ, ನೀನು ಕಪಾಲವನ್ನು ಹಿಡಿದು ಭಿಕ್ಷೆ ಬೇಡುವಿ. ನನ್ನ ಮನಸ್ಸು ಒಂದು ಕಪಿಯಂತೆ ಇದೆ. ಅದು ಸಂಸಾರ ರೂಪವಾದ ಅರಣ್ಯದಲ್ಲಿ ಸಂಚರಿಸುತ್ತದೆ. ಆಶೆಗಳೆಂಬ ಬೇರೆ ಬೇರೆ ಟೊಂಗೆಗಳ ಮೇಲೆ ಜಿಗಿದಾಡುತ್ತದೆ. ಇದು ಅತ್ಯಂತ ಚಂಚಲವಾಗಿದೆ. ಆದ್ದರಿಂದ ಭಕ್ತಿರೂಪ ಹಗ್ಗದಿಂದ ಆ ಮನೋರೂಪವಾದ ಮರ್ಕಟವನ್ನು ಕಟ್ಟಿ ನಿನ್ನ ವಶದಲ್ಲಿ ಇಟ್ಟುಬಿಡು. ಅಂದರೆ ನೀ ಹೇಳಿದಂತೆ ಅದು ಆಡುತ್ತದೆ. ಆಗ ನಿನಗೂ ಭಿಕ್ಷೆ ಸಹಜವಾಗಿಯೇ ಸಿಕ್ಕುಬಿಡುತ್ತದೆ.

೧೬. ಹೇ ರಾಮಚಂದ್ರನೇ, ನೀನು ನಿನ್ನ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಅರಣ್ಯಕ್ಕೆ ಹೋಗಿ ವಾಸಮಾಡಿದೆ. ಅಲ್ಲಿ ಅನೇಕ ರಾಕ್ಷಸರನ್ನು ಸಂಹಾರ ಮಾಡಿ ಭೂಮಿಯ ಭಾರವನ್ನು ನಿವಾರಿಸಿರುವಿ. ರಾಕ್ಷಸರ ರಾಜನಾದ ರಾವಣನನ್ನು ಕೊಂದು ಲೋಕದ ಸಂರಕ್ಷಣೆ ಮಾಡಿರುತ್ತೀ. ಅದೇ ರೀತಿಯಾಗಿ ನನ್ನ ವಿನಂತಿಯನ್ನು ಸ್ವೀಕರಿಸಿ ನನ್ನ ಮನೋರೂಪವಾದ ಅರಣ್ಯದಲ್ಲಿ ವಾಸಮಾಡು. ಇಲ್ಲಿಯೂ ಅಹಂಕಾರ, ಲೋಭ, ಕಾಮ ಮುಂತಾದ ರಾಕ್ಷಸರು ಇರುತ್ತಾರೆ. ಅವರನ್ನು ಸಂಹರಿಸು. ರಾಕ್ಷಸರ ರಾಜನಂತೆ ನನ್ನ ಅಹಂಕಾರ ಇದೆ. ಅದು ವಿವೇಕವೆಂಬ ಸೀತೆಯನ್ನು ಅಪಹರಿಸಿದೆ. ಅದಕ್ಕೆ ದುರ್ಗುಣಗಳೆಂಬ ಶಿರಸ್ಸುಗಳಿವೆ. ಅವುಗಳನ್ನು ಛೇದಿಸಿ ನನ್ನನ್ನು ರಕ್ಷಿಸು.

೧೭. ಹೇ ಸಮುದ್ರವೇ, ದೂರ ದೇಶದಿಂದ, ಪರ್ವತದಿಂದ ನದಿಗಳು ಹರಿದು ಬರುತ್ತವೆ. ಆ ಎಲ್ಲ ನದಿಗಳು ನಿನ್ನನ್ನೇ ಸೇರುತ್ತವೆ. ಆಗ ನೀನು ಎಲ್ಲ ನದಿಗಳ ಮಧುರವಾದ ನೀರನ್ನು ಉಪ್ಪುನೀರನ್ನಾಗಿ ಮಾಡುವಿ. ತೆಂಗಿನ ಗಿಡವು ಉಪ್ಪುನೀರನ್ನು ಕುಡಿಯುತ್ತದೆ. ಆದರೆ ಸಿಹಿಯಾದ ನೀರನ್ನು ಎಲ್ಲರಿಗೂ ಕೊಡುತ್ತದೆ. ಇದು ಸಜ್ಜನರ ಮಾರ್ಗ. ಒಳ್ಳೆ ವಸ್ತುವನ್ನು, ಸಂಪತ್ತನ್ನು

ವ್ಯರ್ಥವಾಗಿ ನಾಶಮಾಡಬಾರದು. ತಾನು ಕಷ್ಟಗಳನ್ನು ಸಹಿಸಿಕೊಂಡರೂ ಬೇರೆಯವರಿಗೆ ಒಳ್ಳೆಯದನ್ನು ಮಾಡಿದರೆ ಪರಮಾತ್ಮನು ಸಂತುಷ್ಟನಾಗುತ್ತಾನೆ. ಪರೋಪಕಾರವೇ ಪುಣ್ಯ. ಅಪಕಾರವೇ ಪಾಪವಿರುತ್ತದೆ.

೧೮. ಅಪಕ್ವವಾದ, ರುಚಿ ಇಲ್ಲದ, ಸುಂದರವಾದ, ವರ್ಣವಿಲ್ಲದ, ಕಠೋರವಾದ ಮಾವಿನಕಾಯಿಯನ್ನು ಮಾಮರವು ಗಟ್ಟಿಯಾಗಿ ಹಿಡಿದುಕೊಳ್ಳುತ್ತದೆ. ಆದರೆ ಅತ್ಯಂತ ಪಕ್ವವಾದ ರುಚಿಕರವಾದ ರಸಮಯವಾದ ಸುವರ್ಣವಿರುವ ಮೃದುಆದ ಹಣ್ಣನ್ನು ಕೆಳಗೆ ಬಿಟ್ಟುಬಿಡುತ್ತದೆ. ಇದು ಬಹಳ ವಿಚಿತ್ರವಾದ ಪದ್ಧತಿ. ರಾಜನೇ, ಅನುಭವಿಕರಿಗು, ಒಳ್ಳೆ ಸ್ವಭಾವವಿರುವವರಿಗು ನೀನು ಆಶ್ರಯ ಕೊಡು. ಜ್ಞಾನವಂತರನ್ನು ತಿರಸ್ಕರಿಸಬೇಡ.

1. A Sage by name Vaalmeeki was living in this hermitage. The surrounding area is very pleasant here. The river Tamasaa is flowing here with sweet notes just beside. This area is always resounded by the sweet notes of birds. The trees are evergreen here. This holy place was the source of inspiration for Vaalmeeki to write the Raamaayanam.

2. Jeemootavaahana was the son of Jeemootaketu. He was the prince of Vidyaadharas. He found delight in serving his parents. Self-sacrifice was the motif of his life. Jeemootavaahana, once went to the sea-shore. He saw there a heap of bones of serpents killed by Garuda. That sight was greatly painful to him. He decided to avoid violence at the cost of his life.

3. Dharmavyaadha advised Kaushika thus - "O sage ! you are practising penance when you have to serve your parents. It is not good. Your service to your parents is a good penance. Blessings of elders will bring you good days. If they are hurt by their son that son will never reap good fruit. Therefore go back to your home and serve your parents."

4. When Vikrama was king on the earth there was a dance contest at Indra's court. Indra could not decide who among Urvashi and Rambha was more graceful in dancing. Naarada said to Indra -"Vikrama is an expert in the art of dance. Bring him here for judgement." Accordingly Indra invited Vikrama. Vikrama came and adjudged Urvashi to

be the better of the two. Indra was very much pleased and presented him a beautiful throne. That throne was called - "The Judgement seat of Vikramaaditya."

5. Once Lord Buddha was abused by a certain person. After listening to him Buddha asked - "My son, if a person, to whom a gift is offered refuses it, to whom would it belong ?" The man replied -"To him who had presented it !" Lord Buddha said -" My son ! I refuse to accept your abuse. Let it be with you only."Humbled by this reply the man silently went away.

6. Major portion of the Mahaabhaarata deals with morals of Dharma. Many stories of gods, demons, heros, chaste women, animals and birds teach us good lessons. Poets gain much from this epic. It is a rich source of Sanskrit literature. It has become popular not only in India but also in the foreign countries. Vyaasamaharshi is also a character in this epic. Dharma is the core of this epic.

7. Brooding over them again and again Bharata spoke thus - where are my Raama and Seetaa who are like my father and mother. Where has Lakshmana gone ? Vasishtha, the great sage consoled Bharata thus: "O Lad ! take heart. Do not be afflicted in this way. Fate is allmighty. Accordingly your father marched towards the Heaven. After punishing the wicked Rama will come back soon."

8. In the Mahaabhaarata Krishna plays a trick to kill Drona. Accordingly Bhima, having killed an elephant by name Ashwathaamaa, went to Drona and said - "I killed Ashwathaamaa." But Drona did not believe the death of Ashwathaamaa, the long lived one. He asked Dharmaraaja - "What! is it true?" Then Dharmaraaja, instigated by Krishna, announced thus - " Ashwathaama died. I know not whether it is an elephant or a man."

9. Oh Lotus! bees drink your honey and praise your virtues. The wind spreads your sweet smell in all the directions. But it does not expect any reward from you. Good people bring out the virtues of others and show them to the world. Really they are the closest friends of the society. They are blessed indeed.

10. During the terrible days of summer the gardener waters the decaying plants to the best of his capacity. It survives the trees and thus it serves a great deal of help. During the rainy season clouds shower a heavy and continuous rain. But do these clouds gain the same merit which the gardener gets? Similarly, it is really a great help if anybody oblises a little the person who is caught in a severe calamity . It is of no obligation if helped even hundred times more when he is not in distress.

11. Oh sandal tree! you are beautiful to look at. Your flowers are sweet with fragrance. Your branches are rich with the green leaves. People are much helped by your pleasant shade. Your trunk is full of sweet smell. Yet people are affraid of you. They keep you at a distance as they do with wicked persons. For, you are always encirled by handsome serpents.

12. A few drops of water fallen on a piece of hot iron vanish away completely. The same drops of clouds, if fallen on a lotus look beautiful. During the days of Swaati, the same drops, if enter into the mother of counch become beautiful pearls. Perhaps it is company that makes a man good, better or best.

1. एकदा अक्कमहादेवी उषःकाले उत्थाय पूजार्थं नानाविध-प्रसूनानि बिल्वपत्राणि च समानीय स्नानं कृतवती । तदनु प्रसन्न-मानसा सा धौतवस्त्राणि परिधाय भस्मधारणं कृत्वा रुद्राक्षमालिकां धरते स्म। ततः देवाधिदेवस्य मल्लिकार्जुनस्य पुरतः पूजार्थं उपाविशत्। तदा तस्याः वदनं तेजोमयं आसीत् । तस्मिन् समये महेश्वरं वशीकर्तुं भक्तिभावेन पूर्णेन मानसेन च सा ध्यानपरवशाभूता तपोमग्ना पार्वतीव शोभते स्म ।

2. इत्थं विषमिव वमन्त्याः केकेय्याः धूमस्तोम इव वचनं श्रुत्वा नृपः खल्वन्तःपुरे मूर्च्छामगच्छत्। एष वृत्तान्तः सत्त्वरं सर्वत्र गृहेगृहे प्रसृतः। सर्वे कैकेयीं अगर्हन् । नगरवासिनो, राजपुरुषाः, संबन्धिनश्च दुःखिताश्चाभवन्। रामचन्द्रस्तु न किमपि दुःखं मेने। विचित्ररूपाः खलुभवन्ति दैवगतयः । क्षणं यत्र अभिषेक मङ्गलगीतानि श्रुतानि तत्रैव इदानीं वनवासवृत्तं श्रुतं जनैः। यस्य

कृते अभिषेकमण्डपं कृतमासीत् तस्यैव कृते दण्डकारण्यगमनं प्रस्तुतं। रामो लक्ष्मणेन सीतया च सहारण्यं जगाम, राजा च यमपुरम्। सर्वे जनाः वृत्तान्तेनानेन दुःखाभिभूताः संजाताः। राजमहिष्यः विलेपुः,. मन्त्रिणश्च राजभवने अतपन्।

3. संसारेऽस्मिन् परोपकारः एव सारः। यदि जगति परोपकारी न स्यात् तदा अयं संसारः नरकसदृशो भवेत्। परोपकारेणैव निर्धनानां प्राणिनां च रक्षा भवति। परोपकारेण पादपाः प्राणिनः अपि संरक्षिताः भवन्ति। तेन च संसारयात्रा सर्वेषां सुगमा भवति। अतः परोपकारः एव सर्वेषां प्रथमं कर्तव्यं वर्तते ।

4. तानेव पुनः पुनः ध्यायन् पित्रा समो मे भ्राता क्व अस्ति। सीता च मातृसदृशा मे क्व गता। लक्ष्मणः च किमिति न दृश्यते इति जजल्प। एवं बहुधा विलपन्तं भरतं भगवान् वसिष्ठः आह-वत्स शोकं कर्तुं नार्हसि । कर्मकाल वशादेव ते पिता स्वर्गं आस्थितः। रामोऽपि दुष्टजननाशाय अवतीर्णः आत्मनः कर्तव्यं परिसमाप्य पुनरायाति लक्ष्मणेन साकम् । ततः पितुः देहं विधानतः दग्ध्वा सरयूनद्याः सलिले स्नात्वा तस्योदकक्रियां कृत्वा राममन्वेष्टुं हस्त्यश्वरथ पत्तिभिः सह राममार्गेण ययौ ।

5. जगति सर्वेषां प्राणिनां समानः जीवनाधिकारः अस्ति। मानवः विवेकेन यद्यपि सर्वश्रेष्ठः तथापि तेन अन्येषु प्राणिषु क्रौर्यं न प्रदर्शनीयम्। अहिंसा परमो धर्मः दयैव मूलं धर्मस्य इति धर्मस्थापकैः घोषितम्। किन्तु दुर्दैवात् एषु दिनेषु मानवः प्राणिषु दयापरः नैव भवति। अतः प्राणिषु दयां कृत्वा अस्माकं संप्रदायः, संस्कृतिः, धर्मः च रक्षणीयः ।

6. निराहारेण केनचित् वृकेण एका नदी दृष्टा। तत्र एकः अजशावकः पानीयं पिबति स्म। "कथं तं अजं मारयामि" इति सः दुष्टः वृकः चिन्तयति स्म। दूरादेव सः तं अजशावकं एवं अवदत् -"रे अजशावक! मयि पानीयं पिबति सति त्वं कथं नीरं पिबसि। तव पिता पितामहादयः अपराधिनः आसन् तद्वंशीयः त्वं अधुना दण्डार्होऽसि। दुष्टशिक्षणं शिष्टसंरक्षणं अस्माकं धर्मः" इत्यादिभिः धूर्तवचनैः भयमुत्पाद्य तं ममार, चखाद च। दौर्जन्यप्रदर्शने दुर्जनानां किं किं साधनं न भवति।

7. "गृहिणी गृहमुच्यते" इति सुभाषितकार वचनं गृहस्थ जीवने महिलायाः स्थानं दर्शयति। प्रियवादिनी सुशीला भार्या स्वगृहे स्वर्गसुखं आनयति। अप्रियवादिनी कलहप्रिया दुष्टस्वभावा जाया तु इहैव नरकस्य प्रतीकं प्रदर्शयति। तादृशी भार्या वर्तते चेत् सा "पुरुषस्य दारुणा जरा" इति सुभाषितकाराः वदन्ति। अत एव

"वृक्षमूलेऽपि दयिता यत्र तिष्ठति तत् गृहम्। प्रासादोऽपि तया हीनः अरण्यसदृशो भवेत्" इति कवयः संगिरन्ति।

8. भारतीय संस्कृतिः समग्रेऽपि जगति प्राचीनतमा विद्यते। धर्मः अस्याः संस्कृतेः केन्द्रबिन्दुरिव वर्तते। महर्षयः महता तपसा दिव्यदृष्टिं समासाद्य जीवनमार्गं प्रदर्शितवन्तः। स एव सत्पथः संस्कृति-शब्देन व्यपदिश्यते। "सर्वे जनाः सुखिनो भवन्तु" इति इयं संस्कृतिः घोषयति। "परोपकारः पुण्याय पापाय परपीडनम्" इति नीतिं बोधयति। "यत्र नार्यस्तु पूज्यन्ते रमन्ते तत्र देवताः" इति महिलायाः गौरवं सूचयति। "मातृदेवो भव पितृदेवो भव अतिथिदेवो भव" इति हितं उपदिशति।

9. पुरा सूर्यवंशे यशोधनो विक्रमो नाम नरेन्द्रो बभूव। सः मृगयायां रसिकः कदाचित् वने जवातिशयेन तुरगवरेण सुदूरं हृतः आयासपीडितोऽभूत्। गुणनिधिः सः तत्रैव निर्मलसरसि स्नात्वा विगतश्रमः पल्लवासने समुपविश्य विलोलहंसानां जलक्रीडामपश्यत्। अत्रान्तरे मन्दानिले विलोलकुन्तला, पञ्चकपाले पुष्पफलानि संगृह्य काचित् इन्दीवराक्षी कन्या सहसा उपतीरमासाद्य अतिष्ठत्। सोऽथ विक्रमः राजा तां सुन्दराङ्गीं सकुतूहलं विलोक्य मन्मथसायकेन समाकृष्टः। तामुपसृत्य पाणिग्रहणार्थं अपृच्छत्। साच वामलोचना -"स्वपित्रोः अनुमतिमावाप्य परिणेतुमिच्छामि" इत्यवदत्। सन्तुष्टश्च राजा तस्याः जननीजनकयोः अनुमतिं लब्ध्वा तां परिणीतवान्।

10. गम्भीरजले परशुः पतित इति रुदन् काष्ठविक्रेता भक्तिभावेन जलदेवतां प्रार्थयत्। देवता च आविर्भूय जले हस्तं प्रसार्य सुवर्णं परशुं आनयत्। किमयं त्वदीयः कुठारः इत्यपृच्छत्। स तु नेत्युवाच। द्वितीयवारं पुनश्च राजतं परशुं दर्शयामास। तमपि नेति अवदत्। चरमे आयसं परशुं यदा प्रदर्शयामास तदा सः सामोदं तं स्वीचकार। सत्यनिष्ठतां दृष्ट्वा सा देवता अवशिष्टं कुठारद्वयं, संपदं च ददौ।

11. सहस्रवर्षात् प्राक् सकलराजगुणसंपन्नः बाहुबलिर्नाम राजा आसीत्। स्वनामधेयं सार्थकयन् सः बाहुबलेन सकलामपि धरणीं जित्वा धर्मेण शासति स्म। गच्छति काले जगतः नश्वरत्वं अनुभाव्य सकलमपि ऐश्वर्यं पर्यत्यजत्। जगतः शान्तिं कामयमानः सः अहिंसातत्वं उपादिशत्। स एव बाहुबलिः इदानीमपि उन्नतशिलायां अविस्मृतः श्रवणबेलगोल क्षेत्रे विराजमानो दृश्यते।

12. मानवजीवने अर्थनीतिः अनितर-साधारणं महत्पात्रमावहतीत्यत्र कवीनां

विमर्शकानां वा भिन्नाभिप्राया नैव सन्ति। सर्वे गुणाः काञ्चनमाश्रयन्ते इति न्यायेन धनस्य महिमानं निगदन्ति कवयः। "हिरण्यमेवार्जय निष्फला गुणाः" इत्यादिना च धनं विना तृणमपि न चलति इत्यपि केचन आधुनिकाः निगदन्ति। किन्तु तदेव धनं धर्मस्यायतने विनियुज्यते चेत् तस्य सार्थक्यं समवलोक्यते इत्येव विवेकपथं प्रदर्शयति संस्कृत साहित्ये प्रतिबिम्बितं जीवनदर्शनम्। अत एव वित्तार्जने अजरामरत्वं विभाव्य तदर्जने प्रयतितव्यम्, किन्तु तदपेक्षया निरतिशय-महत्वावच्छिन्नस्य धर्मस्यार्जने नैव चिरायितव्यं इति सुस्पष्टमेवं निगदन्ति जीवनदर्शनसूत्रकाराः-

अजरामरवत् प्राज्ञः विद्यामर्थं च साधयेत्।
गृहीत इव केशेषु मृत्युना धर्ममाचरेत्॥ - इति।



**सूत्रैर्वैज्ञानिकैः सम्यग्येन वाङ्मणयः कृताः।**
**राजिताश्च सतां कण्ठे तस्मै पाणिनये नमः॥**

ವೈಜ್ಞಾನಿಕವಾದ ಸೂತ್ರಗಳಿಂದ (ದಾರದಿಂದ) ಮುತ್ತುಗಳನ್ನು ಲೇಸಾಗಿ ಜೋಡಿಸಿ ಬಲ್ಲವರ ಕೊರಳಲ್ಲಿ ಸೊಗಸಾದ ಸರವಾಗಿ ಮನಸೆಳೆವಂತೆ ಮಾಡಿರುವ ಆ ಪಾಣಿನಿಗೆ ಇದೋ ನಮ್ಮ ನಮನ.

**याचे राम नतोऽस्मि मानसवने वासं चिरं मे कुरु**
**वर्तन्ते बहवो हि दुर्गुणगणाः क्रोधादयो राक्षसाः।**
**दर्पो नाम च रावणोऽपहृतवान् सीतां च मे सन्मतिं**
**हत्वा तान् कृपया विमोचय हृतां प्रज्ञां च मामुद्धर॥**

**॥ ते ज स्वि नौ अ धी त म स्तु ॥**







## BOOKS AND RESEARCH PAPERS BY

**DR. KRISHNA V. JOSHI**
Asst-Professor in the Language Faculty,
Karnataka Sanskrit University, Bengaluru

- **Samskrita Shodha Pradeep** (Bi-annual Research Journal) Chief- Editor (Hon) since 2011.
- **Niceties of Ayurvedic Subhaashitas** - Published from Sharada Publishing House, New Delhi -2009,
- **Vidyaaranya Yasho Vaibhava** – Editor, Brahmavidya Prakashana, Dharwad, 2007
- **Samskrita Saahityadalli Magu** – Brahmavidya Prakashana, Dharwad. 2006,
- **Samskrita Aarati Padagalu** – Brahmavidya Prakashana, Dharwad, 2007
- **Samskrit Sookti Deepaavali** – Mahati Publications, Dharwad.2007 (Joint-Authorship)
- 12 research articles (in Sanskrit, Kannada and English) published in different journals.
- Guiding many students for M.phil and Ph.D.
- Attended more than 35 National and International Seminars,

## ಮನೆಗೊಂದು ಪುಸ್ತಕ

ಸಂಸ್ಕೃತ ವ್ಯಾಕರಣದ ಇತಿಹಾಸದಲ್ಲಿ ಕ್ರಾಂತಿಯನ್ನೇ ಮಾಡಿದ ಅಮರಸಿಂಹನ ಅಮರಕೋಶವು ಅಜರಾಮರವಾದ ಕೃತಿರತ್ನ. ಇದು ಕೇವಲ ಪರ್ಯಾಯ ಪದಗಳ ಸಂಗ್ರಹವಾಗಿರದೇ ವ್ಯಾಕರಣದ ಕಣಜವೇ ಆಗಿದೆ. ಸಂಸ್ಕೃತದ ಸಾಂಪ್ರದಾಯಿಕ ಅಧ್ಯಯನದಲ್ಲಿ ಕಂಠಪಾಠಮಾಡುವ ಸಾಲಿನಲ್ಲಿ ಅಮರಕೋಶಕ್ಕೆ ಅಗ್ರತಾಂಬೂಲ. ದ್ರುತಗತಿಯಿಂದ ಹಿಂದು ನೋಡದೆ ಮುಂದೆ ಮುಂದೆ ಓಡುತ್ತಿರುವ ಈಗಿನ ಜಗತ್ತಿನಲ್ಲಿ ಸಂಪೂರ್ಣವಾಗಿ, ಮೂರೂ ಕಾಂಡಗಳನ್ನು ಕಂಠಪಾಠಮಾಡಲು ಅವಕಾಶ ಸಿಗುವುದು ಕಠಿಣ. ಅಧ್ಯಯನಕ್ಕೆ ಕಸುವು ಬರಬೇಕಾದರೆ ಸ್ವಲ್ಪವಾದರೂ ಕಂಠಪಾಠ ಮಾಡುವದು ಅನಿವಾರ್ಯ. ಅಮರಕೋಶದ ಅತ್ಯಾವಶ್ಯಕವಾದ ಶ್ಲೋಕಗಳನ್ನು ಶಬ್ಧಸಂಪತ್ತಿಗೋಸ್ಕರ ಇಲ್ಲಿ ಆರಿಸಿ ಕೊಡಲಾಗಿದೆ. ಸಂಸ್ಕೃತ ಅಧ್ಯಯನದ ಆರೋಗ್ಯಕರವಾದ ಅಧ್ಯಯನಕ್ಕೆ ಇಷ್ಟು ಕಂಠಪಾಠ ಮಾಡಿದರೂ ಸಾಕು.

ಸುಮಾರು 38 ವರುಷಗಳ ಅಧ್ಯಾಪನ ಮಾಡಿದ ಅನುಭವದಲ್ಲಿ ಸಂಸ್ಕೃತ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಎದುರಿಸುತ್ತಿರುವ ತೊಂದರೆಗಳನ್ನು ಮನಗಂಡು ಅದನ್ನು ನೀಗಿಸಲು ಈ ಗ್ರಂಥ ಒಂದು ವಿನೀತ ಪ್ರಯತ್ನ. ವಾಕ್ಯರಚನೆಗೆ ಅನುಕೂಲವಾಗಲು ನ್ಯಾಯಗಳು, ಸಾಹಿತ್ಯದ ಶ್ಲೋಕಗಳು, ಅಲಂಕಾರ, ವೃತ್ತ, ಧಾತುರೂಪಗಳ ಕೋಷ್ಟಕ, ಅನುವಾದಕ್ಕೆ ಪರಿಚ್ಛೇದಗಳು ಮುಂತಾದವುಗಳನ್ನು ಇಲ್ಲಿ ಕೊಡಲಾಗಿದೆ. ವಿಧ್ಯಾರ್ಥಿಗಳಿಗೆ ಸಿಗುವ ಅವಕಾಶವನ್ನು ಮನದಲ್ಲಿಟ್ಟುಕೊಂಡೆ ಇವುಗಳನ್ನು ಯೋಜಿಸಲಾಗಿದೆ.

ಸಂಸ್ಕೃತ ವ್ಯಾಕರಣ ಸಮುದ್ರದಂತೆ ಅಪಾರ, ಅಗಾಧ. ಬಹಳ ಆಳಕ್ಕೆ ಹೋಗುವದು ಕೆಲವು ಸಂದರ್ಭದಲ್ಲಿ ಹೆಚ್ಚು ಅವಶ್ಯವೆನಿಸುವುದಿಲ್ಲ. ಅಂತೆಯೇ ಬಹಳ ಸೂಕ್ಷ್ಮವಾದ ಅಂಶಗಳನ್ನು ಬಿಟ್ಟು ಅವಶ್ಯವಾದವುಗಳನ್ನಷ್ಟೇ ಇಲ್ಲಿ ಆರಿಸಿ ಕೊಡಲಾಗಿದೆ. ಒಟ್ಟಾರೆ ವಿದ್ಯಾರ್ಥಿಗಳಿಗೆ ಭಾರವಾಗಿ ಹೆಚ್ಚಾಗದಂತೆ, ಶಿಕ್ಷಕರಿಗೆ ಕಡಿಮೆಯಾಗದಂತೆ ನೋಡಿಕೊಳ್ಳಲಾಗಿದೆ. ಹೈಸ್ಕೂಲು, ಪಿ.ಯು.ಸಿ. ಸ್ನಾತಕ ಹಾಗೂ ಸ್ನಾತಕೋತ್ತರ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಸರಿಯಾದ ಸಾರವತ್ತಾದ ಸಂಸ್ಕೃತ ಕಲಿವಿನ ಸಾಧನವಾಗುವಂತೆ ಇದನ್ನು ರಚಿಸಲಾಗಿದೆ.



Rs. 120/-

ISBN : 978-81-8465-560-5

